॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

---

# ನಾರೀಉಪದೇಶವು.


ಮೂಲಲೇಖಕ:—ಸ್ವರ್ಗಸ್ಥ ಗಿರಿಜಾಕುಮಾರಘೋಷ.

ಅನುವಾದಕಿ:—ಮಂದಾಕಿನೀಬಾಯಿ.



ಪ್ರಕಾಶಕ:—ಪಾವಂಜೆ ಗುರುರಾವ್.

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1928.

ಕ್ರಯ: 0—6—0.

# ವಿಷಯಸೂಚಿ.

# ಮುನ್ನುಡಿ.

ಶ್ರೀಯುತ ಸ್ವರ್ಗಸ್ಥ ಗಿರಿಜಾಕುಮಾರ ಘೋಷರು ಹಿಂದೀಭಾಷೆಯಲ್ಲಿ ಬರೆದ ಈ ನಾರೀಉಪದೇಶವನ್ನು ಓದಿದ ಕೂಡಲೇ ಈ ಗ್ರಂಥವನ್ನು ನನ್ನ ಕರ್ಣಾಟಕ ಭಗಿನಿಯರಿಗೂ ಓದಿಸುವಂತೆ ಮಾಡಬೇಕೆಂದು ಮನಸ್ಸಿನಲ್ಲಿ ಆಶಾಂಕುರವು ಉಂಟಾಯಿತು. ಆದರೆ ಒಂದು ಗ್ರಂಥವನ್ನು ಅನುವಾದಮಾಡುವಷ್ಟು ಶಕ್ತಿಯೂ ಜ್ಞಾನವೂ ನನಗಿಲ್ಲ. ಕನ್ನಡ ಭಾಷೆಯಲ್ಲಿ ವಿಶೇಷವಾಗಿ ಪರಿಶ್ರಮವಿಲ್ಲದಿರುವುದರಿಂದಲೂ ನನ್ನ ಭಾಷಾಶೈಲಿಯು ಉತ್ತಮತರಗತಿಯಲ್ಲಿರುವುದಲ್ಲದರಿಂದಲೂ ಭಾಷಾಸೇವಿಗಳಿಗೆ ಇದೊಂದು ಗ್ರಂಥವಾಗಿ ಗಣನೆಗೆ ಬರಲಿಕ್ಕಿಲ್ಲವೆಂದು ತಿಳಿಯಿತು. ಆದರೂ ಭಗಿನೀಸಮಾಜದ ಸೇವೆಯನ್ನು ಮಾಡಬೇಕೆಂಬ ಅತ್ಯುತ್ಕಟ ಆಕಾಂಕ್ಷೆಯಿಂದ ಪ್ರೇರಿತಳಾಗಿ ಈ ಅನುವಾದಕ್ಕೆ ಕೈಹಾಕಿದೆನು. ಇದಂ ಪ್ರಥಮವಾಗಿ ಈ ಅನುವಾದವು ನನ್ನಿಂದ ಮಾಡಲ್ಪಟ್ಟದ್ದರಿಂದ ಸಹಜವಾಗಿ ಭಾಷಾಶೈಲಿಯಲ್ಲಿ ಕೆಲವು ಕುಂದುಕೊರತೆಗಳು ಇದ್ದೇ ಇರುವವು. ಸಮಾಜಸೇವೆಯ ದೃಷ್ಟಿಯಿಂದ ಮಾಡಿದ ಈ ಅನುವಾದರೂಪವಾದ ಸೇವೆಯನ್ನು ಭಗಿನೀಸಮಾಜವು ಸ್ವೀಕರಿಸಬೇಕಾಗಿ ಪ್ರಾರ್ಥನೆ. ಈ ಗ್ರಂಥವನ್ನು ಅನುವಾದಮಾಡಲಿಕ್ಕೆ ಅನುಮತಿಯನ್ನು ಕೊಟ್ಟ ಮಹಿಲಾಮಾಲೆಯ ಸಂಪಾದಕಿಯಾದ ಶ್ರೀಮತಿ ಕೃಷ್ಣಕುಮಾರಿಯವರಿಗೆ ಆಭಾರವನ್ನು ಸಮರ್ಪಿಸುತ್ತೇನೆ. ಮತ್ತು ಈ ಗ್ರಂಥವನ್ನು ಛಾಪಿಸಿ ಪ್ರಕಟಿಸಿದುದಕ್ಕಾಗಿ ನನ್ನ ಜನಕನಿಗೆ ನನ್ನ ಕೃತಜ್ಞತೆಯನ್ನು ಪ್ರತ್ಯೇಕವಾಗಿ ತೋರಿಸಬೇಕಾಗಿಲ್ಲ. ಈ ಗ್ರಂಥದ ಉಪಯೋಗವನ್ನು ಒಬ್ಬಳಾದರೂ ಕರ್ಣಾಟಕರಮಣಿಯು ಮಾಡಿಕೊಂಡರೆ ನನ್ನ ಶ್ರಮವು ಸಾರ್ಥಕವಾಯಿತೆಂದು ತಿಳಿಯುತ್ತೇನೆ.

ಇತಿ ಸಾಧ್ವೀಮಣಿಗಳ ಕೃಪಾಭಿಲಾಷಿ,

ಉಡುಪಿ,
ತಾ. 5—6—1928

**ಮಂದಾಕಿನೀಬಾಯಿ.**

# ಶುದ್ಧಾಶುದ್ಧಪತ್ರಿಕೆ.



| ಅಶುದ್ಧ | ಶುದ್ಧ | ಪುಟ | ಪಂ |
|---|---|---|---|
| ತಿಳಿದು ದೇವತೆಯಂತೆ | ದೇವತೆಯಂತೆ ತಿಳಿದು | 8 | |
| ಚಿತ್ತ | ಚಿತ್ರ | 12 | 17 |
| ಮಂಗಲಗಳೂ | ಮಂಗಲ | 14 | 12 |
| ಪಾಪ | ಪಾವ | 19 | 10 |
| ವೂ ಜಿತಳಾಗುತ್ತಾಳೆ | ಪೂಜಿತಳಾಗುತ್ತಾಳೆ | 23 | 12 |
| ಮಾತನ್ನೆ | ಮಾತನ್ನೇ | 27 | 23 |
| ಜಗಳ | ಜಗಳದ | 42 | 7 |
| ಬಿಟ್ಟ | ಬಿಟ್ಟು | 46 | 22 |
| ಕಾಡ | ತಾಳ | 52 | 4 |
| ಹಿಂದೂರಮಣಿಯರ | ಹಿಂದೂರಮಣಿಯರು | 78 | 14 |
| ನೆಟ್ಟದೆ ? | ನೆಟ್ಟದೆ | 81 | 7 |
| ಆಯುಷೆ | ಆಯಷೆ | 83 | 11 |



# ಭೂ ಮಿ ಕಾ .

ಜಗತ್ತಿನ ಇತಿಹಾಸದಲ್ಲಿ "ಭಾರತದೇಶವು ಸಾವಿರಾರು ವರ್ಷಗಳಿಂದಲೂ ಸಭ್ಯತೆಯ ಶಿಖರವನ್ನೇರಿರುತ್ತದೆ" ಎಂಬದು ಸುಪ್ರಸಿದ್ಧವಾದ ಮಾತೇ ಆಗಿದೆ. ಈ ಸಮಯದಲ್ಲಿ ಯೂರೋಪ್ ಮೊದಲಾದ ಪಾಶ್ಚಾತ್ಯದೇಶವು ಕಲಾಕುಶಲತಾದಿ ವೈಜ್ಞಾನಿಕ ಬಲದಿಂದ ಮುಂದರಿಯುತ್ತದೆಂಬುದು ತಿಳಿದುಬರುತ್ತದೆ. ಆದರೂ ಭಾರತದೇಶವು ತನ್ನ ಕಳೆಗುಂದಿದ ದೆಶೆಯಲ್ಲಿಯೂ, ಧರ್ಮಬಲದಲ್ಲಿಯೂ, ಸಾಮಾಜಿಕಜ್ಞಾನವೃದ್ಧತೆಯಲ್ಲಿಯೂ ಯೂರೋಪಿಗಿಂತ ಹೆಚ್ಚಾಗಿಯೇ ಇದೆ. ಆದರೆ ಭಯಂಕರವಾದ ಕಾನನದಲ್ಲಿರುವ ಘನವಾದ ವೃಕ್ಷ, ಕೊಂಬೆ, ಫಲ, ಪುಷ್ಪ ಮತ್ತು ಅದರ ಚಿಗುರುವಿಕೆ ಮೊದಲಾದವುಗಳ ಕಾರಣವು, ಅದರ ಪಾತಾಳಭೇದಿಯಾದ ಭೂಗರ್ಭನಿಮಜ್ಜಿತ ವಿಶಾಲ ಮತ್ತು ವಿಸ್ತೃತವಾದ ಬೇರುಗಳು ಹೇಗೋ, ಮತ್ತು ಹೇಗೆ ಅವುಗಳು ಎರಡನೇ ಮಹಾರಣ್ಯದಂತೆ ಇರುವ ಪೃಥ್ವೀಗರ್ಭದೊಳು ಹೊಕ್ಕು ಧರಾತಲದಲ್ಲಿರುವ ರಸಗಳನ್ನು ಹೀರಿ ಆ ವೃಕ್ಷಲತೆಗಳ ಎಲೆ ಎಲೆಗೂ ಫಲ ಪುಷ್ಪಗಳಿಗೂ ಅದರ ರಸವನ್ನು ಮುಟ್ಟಿಸಿ ಅವುಗಳನ್ನು ಚಿಗುರಿ ಹಸುರಾಗಿರುವಂತೆ ಮಾಡುತ್ತವೆಯೋ, ಅದೇ ರೀತಿ ಪ್ರತ್ಯೇಕ ಸಭ್ಯಸಮಾಜದ ಕುಲೋನ್ನತಿಗೂ, ಆನಂದಕ್ಕೂ, ಶಾಂತಿಗೂ ಆ ಸಮಾಜದ ಸ್ತ್ರೀಜನನಿಯೇ ಕಾರಣವು. ಸ್ತ್ರೀಜಾತಿಯೇ ಆ ಧಾರ್ಮಿಕ, ಸಾಮಾಜಿಕ, ನೈತಿಕ ಚರಿತ್ರೆಯ ಬಲವು. ಅದರ ಪ್ರತಾಪದಿಂದಲೇ ಅವಳು ತನ್ನ ಪತಿ, ಪುತ್ರ, ಭ್ರಾತೃ, ಪಿತೃ ಇವರೇ ಮೊದಲಾದವರಲ್ಲಿ ತನ್ನ ಪ್ರಭಾವವನ್ನು ತೋರಿ ಅವರ ಜೀವನವನ್ನು ಕರ್ಮ-ಕುಶಲ ಮತ್ತು ಜ್ಞಾನ-ವಿಜ್ಞಾನಮಯವನ್ನಾಗಿ ಮಾಡುತ್ತಾಳೆ.

ಛಳಿಗಾಲದ ಉಡಿಗೆತೊಡಿಗೆಯು ಉಷ್ಣಕಾಲದಲ್ಲಿ ಹೇಗೆ ಸುಖದಾಯಕವಾಗದೆ ದುಃಖದಾಯಕವಾಗುತ್ತದೋ, ಅದೇ ರೀತಿ ಪಾಶ್ಚಾತ್ಯದೇಶದ ಸಾಮಾಜಿಕ ದೆಶೆಯು ಭಾರತಕ್ಕೆ ಸರ್ವಥಾ ಉಪಯೋಗಿಯಾಗಲಾರದು. ಇಲ್ಲಿಯ ಮತ್ತು ಅಲ್ಲಿಯ ಧಾರ್ಮಿಕ, ಆರ್ಥಿಕ, ಸಾಮಾ

ಜಿಕ, ನೈತಿಕ ಮೊದಲಾದ ಎಲ್ಲಾ ವಿಚಾರಗಳಲ್ಲಿಯೂ ಬಹಳ ಅಭ್ಯಂತರ ವಿದೆ. ಆದಕಾರಣ ಯಾರು ಪಾಶ್ಚಾತ್ಯ ಸಭ್ಯತೆಯ ಹೊರಗಿನ ಥಳಕು-ಪಳಕನ್ನು ನೋಡಿ ಭ್ರಾಂತರಾಗಿದ್ದಾರೋ, ಮತ್ತು ಭಾರತದ ಸ್ತ್ರೀಸಮಾಜವನ್ನು ಪಾಶ್ಚಾತ್ಯ ರೀತಿಯಲ್ಲಿ ಬೀಳಿಸಲೆಣಿಸುತ್ತಾರೋ, ಅವರು ತಮ್ಮ ಕೈಗಳಿಂದಲೇ ಕಾನನದ ವೃಕ್ಷಗಳ ಅನಂತವಾದ ಚಿಗುರುವಿಕೆಗೆ ಮೂಲ ಕಾರಣವಾದ ಬೇರುಗಳನ್ನೇ ಕೀಳಲೆಣಿಸಿದಂತೆಯೇ ಸರಿ. ಕಾಲವಶ ದಿಂದ ಭಾರತೀಯ ಸಮಾಜದಲ್ಲಿ ಯಾವ ದುರ್ಗುಣವು ಕಾನನದ ವೃಕ್ಷ ಗಳ ಬೇರುಗಳಿಗೆ ಗೆದ್ದಲು ಹಿಡಿದಂತೆ ಅಂಟಿದೆಯೋ, ಅದನ್ನು ಕಡಿದು, ಬಡಿದು ದೂರ ಬಿಸಾಡುವುದು ಅವಶ್ಯಕವಾಗಿದ್ದಾಗ್ಯೂ ಪ್ರಾಚೀನ ಆರ್ಯ ಋಷಿಗಳ ಆದರ್ಶವನ್ನು ಬಿಟ್ಟುಕೊಟ್ಟು ಸಾಮಾಜಿಕ ದೃಢ ಜ್ಞಾನದಿಂದ ಅನಭಿಜ್ಞ ನವೀನ ಪಾಶ್ಚಾತ್ಯ ಪರಿಪಾಠಿಯ ಅಬಾಧಶಿಕ್ಷೆಯು ಭಾರತೀಯ ನಾರೀಸಮಾಜದಲ್ಲಿ ಹಿಂದು ಮುಂದು ನೋಡದೆ ಮುಂದರಿಸುವುದು ಬಹಳ ಅನುಚಿತವೇ ಸರಿ. ಸಲಜ್ಜಾ, ಸುಶೀಲತಾ, ಕೋಮಲತಾ, ಧರ್ಮ ಕಥಾ ಕರ್ತವ್ಯನಿಷ್ಠೆಯು ಮೊದಲಾದ ಎಲ್ಲಾ ಸದ್ಗುಣ, ಆತ್ಮತ್ಯಾಗ, ನಿಷ್ಕಾಮಕರ್ಮೋಪಾಸನ, ಕರ್ಮಯೋಗದ ಮಹತ್ವ ಭಾರತ ಲಲನೆ ಯರ ಸಹಜವಾದ ಧನವು. ಗೃಹಿಣಿಯು ಎಲ್ಲಾ ಕೆಲಸಕಾರ್ಯಗಳನ್ನು ಮಾಡಿಕೊಂಡು ಯಥಾಶಕ್ತಿ ಸಾಧಾರಣವಾದ ಸದಿಚ್ಛೆಗಳನ್ನೆಲ್ಲಾ ಪೂರೈ ಸಿಕೊಂಡು ಭಾರತದ ಕುಲಕಾಮಿನಿಯರು ವಾಸ್ತವವಾಗಿಯೂ ನಿಷ್ಕಾ ಮಿನೀ ಅರ್ಥಾತ್ ನಿಷ್ಕಾಮವ್ರತವನ್ನು ಲಕ್ಷ್ಯದಲ್ಲಿಟ್ಟುಕೊಂಡು ಜೀವನ ಯಾತ್ರೆಯನ್ನು ಮುಂದರಿಸುವವರಾಗಿರುತ್ತಾರೆ.

ಈ ದಿನ ಯಾರು ಬೊಂಬೆಯ ಮದುವೆಯನ್ನು ಮಾಡಿ ನೋಡಿ ಆಟದ ಅಂತ್ಯವನ್ನು ಮುಗಿಸುತ್ತಾರೆಯೋ, ನಾಳೆ ಅವರೇ ವಧುವಾ ಗಿಯೂ, ಆ ಮೇಲೆ ಮಗುವಿನ ತಾಯಿಯಾಗಿಯೂ ಅಸತ್ಯವಾದ ಗೊಂಬೆ ಯನ್ನು ಬಿಟ್ಟು ನಿಜವಾದ ಜೀವಂತಗೊಂಬೆಯನ್ನು ಹಿಡಿದುಕೊಂಡು ಆಡುತ್ತಿದ್ದರೂ ಆತ್ಮತ್ಯಾಗದ ಪ್ರತ್ಯಕ್ಷಮೂರ್ತಿಯೂ ನಿಷ್ಕಾಮವ್ರತದ ಅಮೋಘವಾದ ಸಾಧಕಿಯೂ ಆಗುತ್ತಾಳೆ. ನೂರಾರು ಇಚ್ಛೆಗಳೂ ಆಶೆ

ಗಳೂ ಹೃದಯದಲ್ಲಿ ಉದಯವಾಗುತ್ತಿದ್ದರೂ ಕಾಮಿನಿಯರು ಸಂತೋಷದ ಮೂರ್ತಿಯಾಗಿ ಎಲ್ಲಾ ಕಾಮನೆಗಳನ್ನು ಪತಿದೇವತೆಯ ಇಚ್ಛೆ ಮತ್ತು ಆರ್ಥಿಕ ದೆಶೆಯ ಮೇಲೆ ಅವಲಂಬಿಸಿ ನಿಷ್ಕಾಮತಪಸ್ವಿನೀ ಮತ್ತು ಸಂಯಮಿಯಾಯತಿಯಂತೆ ಗೃಹಸ್ಥಾಶ್ರಮದಲ್ಲಿ ಶಾಂತಿ, ಧರ್ಮ ಮತ್ತು ಸುಖಮಯವಾದ ಧಾರೆಯನ್ನು ಪ್ರವಹಿಸಲು ಸಮರ್ಥಳಾಗುತ್ತಾಳೆ. ವೇದಾದಿ ಶಾಸ್ತ್ರಗಳಲ್ಲಿ ಸನಾತನ ಆರ್ಯನಾರೀ, ಭಾರತನಾರಿಗೋಸ್ಕರ ಇದೇ ಉಪದೇಶವು ಕಾಣಬರುತ್ತದೆ.

ಯಾವದರಿಂದ ಗೃಹಸ್ಥಾಶ್ರಮವನ್ನು ನಿಷ್ಕಾಮವಾಗಿಯೂ, ಸಂತೋಷಯುಕ್ತವಾಗಿಯೂ ಕಳಿಯಬೇಕಾಗಿದೆಯೋ, ಯಾವದರಿಂದ ಬಡವರಲ್ಲಿ ಪರಮಶಾಂತಿ ದೊಡ್ಡವರಲ್ಲಿ ಪರೋಪಕಾರ ಮತ್ತು ದಯೆ ಮೊದಲಾದ ಮಹಾಕರ್ತವ್ಯಜನಿತ ಸುಖಗಳು ಸುಲಭವಾಗಿರುತ್ತವೆಯೋ, ಆ ಶಿಕ್ಷಣವನ್ನು ಈ ನಾರೀಉಪದೇಶದಲ್ಲಿ ತೋರಿಸಿಯದೆ.

ಶಾಂತ ಮತ್ತು ತೀವ್ರ ಈ ಎಲ್ಲಾ ದೆಶೆಗಳಲ್ಲಿಯೂ ಭಾರತನಾರಿಯರು ವಾಸ್ತವವಾಗಿಯೂ ದೇವೀಪದವಿಯನ್ನು ಹೊಂದಲರ್ಹರೆಂಬದು ಪ್ರಥಮ ಕವಿತೆಯಲ್ಲಿ ತೋರಿಸಲ್ಪಟ್ಟಿದೆ. "ಎಲೆ ನಾರಿ" ಎಂಬ ಪ್ರಥಮ ಲೇಖನದಲ್ಲಿ ನಾರಿಯು ಪುರುಷನ ಪ್ರತಿದ್ವಂದಿನಿಯಾಗದೆ ಪ್ರೇಮ ಭಕ್ತಿಯ ಭಾಗಿನಿ ಎಂಬದನ್ನು ತನ್ನ ವಿಚಾರಕಥಾ ಆಚರಣೆಯನ್ನು ಶೋಧಿಸಿ ತಿಳಕೊಳ್ಳುವ ವಿಷಯವನ್ನು ತೋರಿಸಿಯದೆ. ಎರಡನೇ ಮೂರನೇ ಲೇಖನದಲ್ಲಿ ನಾರಿಮಹತ್ವದ ವಿಕಾಸವನ್ನು ತೋರಿಸಿಯದೆ. ಗೃಹಸ್ಥಾಶ್ರಮವಾಸಿನಿಯರಾದ ಪುರಮಹಿಳೆಯರ ಕರ್ತವ್ಯ, ದಿನಚರ್ಯ, ಸುಶೀಲತೆ, ಲಜ್ಜಾ ಮೊದಲಾದ ಸದ್ಗುಣಗಳ ವಿಕಾಸವು ಹೇಗೆ ಆಗುವುದು ಎಂಬದನ್ನು ತಿಳಿಸಿ ಅಂತ್ಯದಲ್ಲಿ ತ್ಯಾಗ ಧರ್ಮ ಹಾಗೂ ಎಲ್ಲಾ ಜ್ಞಾನಗಳ ಸಾರವಾದ ಬ್ರಹ್ಮಜ್ಞಾನದ ವರೆಗೂ ನಾರಿಯರಿಗೆ ಸುಗಮವಾಗುವುದೋ, ಅದನ್ನು ಯಾಜ್ಞವಲ್ಕ್ಯ ಮೈತ್ರೇಯಿಯ ಸಂವಾದದಲ್ಲಿ ತೋರಿಸಿಯದೆ. ಇದೇ ರೀತಿ ಭಾರತೀಯ ಆದರ್ಶಕ್ಕನುಸಾರವಾಗಿ ನಾರೀಜೀವನದ ಮಹತ್ವವು ಪುರುಷಜೀವನಕ್ಕಿಂತ ಕಡಿಮೆಯಲ್ಲ.

ಅಲ್ಲದೆ ಪರೋಪಕಾರಾದಿ ಎಷ್ಟೋ ಕೆಲಸಗಳಲ್ಲಿ ಶ್ರೇಷ್ಠವಾಗುವುದೆಂಬ ದನ್ನು ಇದರಲ್ಲಿ ಪ್ರಕಟಿಸಿಯದೆ. ಇದರ ಮಹತ್ವವನ್ನೇ ಈ ಸಣ್ಣ ಪುಸ್ತಕದಲ್ಲಿ ಕೊಟ್ಟದೆ. ಭಾರತಲಲನೆಯರು ಇಂಥಾ ಅಮೂಲ್ಯವಾದ ಪುಸ್ತಕದಿಂದ ಲಾಭ ಪಡೆದು ತಮ್ಮ ಮತ್ತು ದೇಶದ ಕಲ್ಯಾಣ ಮಾಡಲಿ. ಮತ್ತು ಪುನಃ ಭಾರತದಲ್ಲಿ ಪ್ರಾಚೀನ ಆರ್ಯರ ಗೃಹಸ್ಥಾಶ್ರಮವು ಸ್ಥಾಪಿತವಾಗಲಿ. ಎಂಬದೇ ಪರಮ ದಯಾಳುವಾದ ಭಗವಂತನಲ್ಲಿ ನನ್ನ ಹಾರ್ದಿಕವಾದ ಪ್ರಾರ್ಥನೆಯಾಗಿದೆ.

**ಗಿರಿಜಾಕುಮಾರಘೋಷ.**

॥ ಶ್ರೀಃ ॥

॥ ಶ್ರೀಲಕ್ಷ್ಮೀನಾರಾಯಣಾಯ ನಮಃ ॥

# ನಾರೀ ಉಪದೇಶವು.

## ಎಲೆ ನಾರಿ!

ಎಲೆ ನಾರಿ! ನೀನು ನನ್ನನ್ನು ಸ್ವಾಧೀನನೆಂದು ತಿಳಿದಿದ್ದೀಯಾ? ನಾನೇನೋ ನನ್ನಿಂದ ಹೆಚ್ಚಾದ ಪರಾಧೀನರು ಯಾರೂ ಇರಲಾರರೆಂದು ಭಾವಿಸುತ್ತೇನೆ. ನಡೆ-ನುಡಿಯಲ್ಲೂ, ಆಹಾರ-ವಿಹಾರಗಳಲ್ಲೂ, ಜಾಗ್ರತ್ಸುಷುಪ್ತಿಯಲ್ಲೂ ಮತ್ತು ಎಲ್ಲಾ ವಿಧದಲ್ಲಿಯೂ ನಿನ್ನ ಮುಖ ನೋಡಿ ನನಗೆ ನಡಿಯಬೇಕಾಗಿದೆ. ನಾನು ರಾತ್ರಿ ಹಗಲು ನಿನ್ನ ಚರಣಗಳಡಿಯಲ್ಲಿ ಬಿದ್ದು ಒದ್ದಾಡುತ್ತೇನೆ. ಸಂಸಾರದಲ್ಲಿ ನಿನ್ನ ಆಜ್ಞೆಯನ್ನು ಅನುಸರಿಸಿ ನನ್ನ ಜೀವನವೆಲ್ಲಾ ಸಂಕೀರ್ಣವಾಗಿ ಹೋಗುತ್ತಿದೆ. ಸುವರ್ಣದಂತೆ ಹೊಳೆಯುತ್ತಿರುವ ನನ್ನ ಸುಂದರವಾದ ಶರೀರವು ಜೀವನ ಸಂಗ್ರಾಮದಲ್ಲಿ ಮಷಿಗೆ ಸಮಾನವಾಗಿ ಕಪ್ಪಾಗುತ್ತಿದೆ. ಆದಾಗ್ಯೂ ನಾನು ಸ್ವಾಧೀನನೆಂದು ನೀನು ಹೇಳುತ್ತಿರುತ್ತೀ? ಈ ಸಂಸಾರರೂಪೀ ಕಾರಾಗಾರ(ಸಂಸಾರವೆಂಬ ಜೈಲ್)ದಲ್ಲಿ ನಿನ್ನ ಆಜ್ಞೆಗೆ ಕಟ್ಟುಬಿದ್ದಿದ್ದೇನೆ. ಬಲವಾದ ಸರಪಳಿಯಿಂದ ನನ್ನ ಕೈಕಾಲುಗಳು ಬಿಗಿಯಲ್ಪಟ್ಟವೆ. ನಿನ್ನ ಆಜ್ಞೆಯಿಲ್ಲದಿದ್ದರೆ ನನ್ನಿಂದ ಒಂದು ಹೆಜ್ಜೆಯೂ ಮುಂದಿಡಲಾಗುತ್ತಿರಲಿಲ್ಲ. ಈ ಮಾಯಾರೂಪೀ ಕಾರಾಗೃಹದಲ್ಲಿ ನೀನು ಎಂಥಾ ಬೇಡಿಗಳನ್ನು ತೊಡಿಸಿರುತ್ತಿ ಎಂದರೆ ಕೃಷಿಕನ ಎತ್ತುಗಳಂತೆ ನನ್ನನ್ನು ಹದಮಾಡಿರುತ್ತಿ. ನಾನು ಈ ಅಪಾರವಾದ ಸಂಸಾರಸಾಗರದಲ್ಲಿ ಹಗಲಿರುಳೂ ಮುಳುಗೇಳುತ್ತಿರುತ್ತೇನೆ. ಅಕಟಕಟಾ, ನನ್ನನ್ನು ರಕ್ಷಿಸು ಎಂಬ ವಾಕ್ಯವನ್ನೇ ಕಂಠಶೋಷಣೆ ಮಾಡಿಕೊಂಡು ಕೂಗುತ್ತಿರುತ್ತೇನೆ. ಪ್ರತಿನಿತ್ಯ

ಬೆಳಗಾಗುತ್ತಲೂ ಹಾಸಿಗೆಯಿಂದೆದ್ದು ಜೀವನಸಂಗ್ರಾಮದ ಜಗಳದಲ್ಲಿ ಸುಸಜ್ಜಿತನಾಗಿ ಹೋಗಿ ಸೇರುತ್ತೇನೆ. ಸೂರ್ಯನಾರಾಯಣನು ಎಷ್ಟರ ವರೆಗೆ ವಿಶ್ರಮಿಸುವುದಿಲ್ಲವೋ, ಅಷ್ಟರ ವರೆಗೆ ನನಗೂ ಅವಕಾಶ ಸಿಗುವು ದಿಲ್ಲ. ಇಷ್ಟಾದರೂ ನಾನು ನಿನ್ನನ್ನು ಪ್ರಸನ್ನೀಕರಿಸಲು ಶಕ್ತನಾಗುವು ದಿಲ್ಲ. ಎಲೆ ನಾರಿ! ನೀನು ಪ್ರಕೃತಿ, ನಾನು ಪುರುಷ. ಪ್ರಕೃತಿಯು ತನ್ನ ಅಸೀಮವಾದ ಬಲದಿಂದ ಪುರುಷನ ಶಿರಸ್ಸಿನಿಲ್ಲಿ ತನ್ನ ಚರಣ ಕಮಲವನ್ನಿಟ್ಟು ಅವನನ್ನು ಹಿಂಸಿಸುತ್ತಿರುತ್ತಾಳೆ. ಅಯ್ಯೋ, ಆದಾಗ್ಯೂ ಪುರುಷನು ಸ್ವಾಧೀನನೆನಿಸಿಕೊಳ್ಳುತ್ತಾನೆ!

ಎಲೆ ನಾರಿ! ನೋಡು. ಆ ಮಹಾಕಾಲೀ-ಮಹಾಕಾಲರ ಚಿತ್ರ ವನ್ನು ನೋಡು. ನೋಡು ಆ ಹಿಮಗಿರಿಗೆ ಸಮಾನನಾದ ಶ್ವೇತವರ್ಣ ವುಳ್ಳವನೂ, ಷಡ್ಯೈಶ್ವರ್ಯಸಂಪನ್ನನೂ ಆದ ಯೋಗೀಶ್ವರನು ಸ್ಮಶಾನ ದಲ್ಲಿ ಬಿದ್ದಿರುತ್ತಾನೆ. ಆದ್ಯಶಕ್ತಿ ಮಹಾಕಾಲಿಯು ಅವನ ಎದೆಯ ಮೇಲೆ ನಿಂತುಕೊಂಡು, ಕೈಯಲ್ಲಿ ಖಡ್ಗವನ್ನೆತ್ತಿಕೊಂಡು, ತುಂಡರಿಸಿದ ರುಂಡ ವನ್ನು ಹಿಡಿದುಕೊಂಡು ವರ ಮತ್ತು ಅಭಯವನ್ನು ಕೊಡುತ್ತಿದ್ದಾಳೆ. ನೋಡು, ಮೂಢಜನರು ಭಯ ಮತ್ತು ಅಭಯದಿಂದ ಒಂದೇ ಸಲ ವಿಸ್ಮಿತರಾಗುತ್ತಾರೆ. ಎಲೇ, ನೀನು ಈ ಚಿತ್ರದ ಗೂಢವನ್ನು ತಿಳಿದೆಯಾ? ಈ ಅಲೌಕಿಕವಾದ ಮೂರ್ತಿಯು ನಿನ್ನದೇ; ಗೃಹಸ್ಥಾಶ್ರಮವೇ ಒಂದು ಮಹಾ ಸ್ಮಶಾನವು. ಅದರಲ್ಲಿ ಅಭಾವರೂಪಿಯಾದ ಹದ್ದುಗಳು ಹಗಲಿ ರುಳೂ ಕೂಗುತ್ತಿರುತ್ತವೆ. ರಕ್ತವನ್ನು ಸಹ ಹೀರುತ್ತಿರುವ ಆತ್ಮೀಯ ಕುಟುಂಬ ಮತ್ತು ಮಿತ್ರಮಂಡಲಿಯು ಈ ಸ್ಮಶಾನದಲ್ಲಿ ಕಪಾಲ ಮತ್ತು ಎಲುಬುಗಳಂತೆ ಕಾಣಬರುತ್ತವೆ. ಸಾಲಕೊಡುವಂಥಾ ಕಪ್ಪು ಕಾಗೆಗಳ ದಳವು ಬಹಳ ಕರ್ಕಶವಾದ ಧ್ವನಿಯಿಂದ ಕಾ ಕಾ ಎನ್ನುತ್ತಿರುತ್ತವೆ. ಗೃಧ್ರಗಳಂತಿರುವ ಭಿಕ್ಷುಕರ ಕೋಲಾಹಲವಾದ ನಾದವು ಈ ಸ್ಮಶಾನ ದಲ್ಲಿ ಪ್ರತಿಧ್ವನಿ ಕೇಳಿಸುತ್ತದೆ.

ಮತ್ತು ಆ ಮಹಾ ಭಯಂಕರ ಸ್ಥಾನದಲ್ಲಿ ಗೃಹದ ಅಧಿಷ್ಠಾತ್ರೀ ದೇವಿಯು ಉಗ್ರವಾದ ಕಾಲಿಕಾಮೂರ್ತಿಯ ಸ್ವರೂಪವನ್ನು ಧಾರಣೆ

ಮಾಡಿಕೊಂಡು ಎಂಟನೇ ಯಾಮದಲ್ಲಿ ಅಭಾಗ್ಯನಾದ ಪತಿಯ ಮೂಗಿ
ನಲ್ಲಿ ಪ್ರಾಣವನ್ನು ತರುತ್ತಿರುವಳು. ಪುರುಷನು ಆ ಪ್ರಕೃತಿಯ ಚರಣ
ಕಮಲವನ್ನು ತನ್ನ ಹೃದಯದಲ್ಲಿ ಧರಿಸಿಕೊಂಡು ಶವ(ಹೆಣ)ದಂತೆ ಬಿದ್ದಿ
ದ್ದಾನೆ. ಅಯ್ಯೋ ಆಗಲೂ ನೀನು ಅವನಿಗೆ ಸ್ವಾಧೀನನೆಂದು ಹೇಳು
ತ್ತಿರುತ್ತೀಯಲ್ಲಾ.

ಯಾವ ಸಮಯದಲ್ಲಿ ನನ್ನ ಜನ್ಮವಾಯಿತೋ, ಆ ಕೂಡಲೇ
ಮಹಾ ಮಾಯಾಮೂರ್ತಿದೇವೀರೂಪಿಣಿಯಾದ ಮಾತೆಯು ಬಹಳ
ಆದರದಿಂದ ಮಡುಲಲ್ಲಿ ಎತ್ತಿಕೊಂಡು ನನ್ನ ಮುಖವನ್ನು ಮುದ್ದಿಸಿ
ಪ್ರಸೂತಿವೇದನೆಯನ್ನು ಮರೆಯಲಾರಂಭಿಸಿದಳು. ಆ ನುಸಿ, ನೊಣ
ಮೊದಲಾದುವುಗಳ ಆಕ್ರಮಣದಿಂದ ವಿವಶವಾದ ಮಗುವನ್ನು ಸದಾಕಾಲ
ದಲ್ಲಿಯೂ ರಕ್ಷಿಸಲಾರಂಭಿಸಿದಳು. ಬಾಲನಾದಾ ಮಗುವು ಮಾತೆಯ
ಸ್ತನದಿಂದ ತೊಟ್ಟಿಕ್ಕುತ್ತಿರುವ ಅಮೃತವನ್ನು ಕುಡಿದುಕುಡಿದು, ಬೆಳೆ
ಯಲಾರಂಭಿಸಿತು. ಮಾತೆಯು ಎಂಟು ಯಾಮಗಳಲ್ಲಿಯೂ ಮಗ
ನನ್ನು ಎತ್ತಿಕೊಂಡು ಪರಿಪಾಲಿಸತೊಡಗಿದಳು. ಬಾಲಕನು ಮಾತೆಯ
ಬಳಿಯಲ್ಲಿ ಪೂರ್ಣರೂಪದಿಂದ ಪರಾಧೀನನಾಗಿದ್ದನು. ನೋಡನೋ
ಡುತ್ತಾ ಅವನು ಮತ್ತೂ ದೊಡ್ಡವನಾದನು. ಕಿಶೋರಾವಸ್ಥೆಗೆ ಮುಟ್ಟಿ
ದನು. ಮಾತೆಯು ಆಗಲೂ ಅವನ ಹಿಂದೆಯೇ ನೆರಳಿನಂತಿದ್ದು ಅವ
ನನ್ನು ರಕ್ಷಿಸತೊಡಗಿದಳು.

ಪಂಜರದಿಂದ ಹಾರಿಹೋದ ಪಕ್ಷಿಯಂತೆ ಕಿಶೋರಾವಸ್ಥೆಯು
ಎಲ್ಲಿಯೋ ತಿಳಿಯದಂತೆ ಹಾರಿಹೋಯಿತು. ಯೌವನಾವಸ್ಥೆಯು
ಕಾಣಬಂತು. ಎಲ್ಲಿಂದಲೋ ತಿಳಿಯದು. ದೇವತೆಯಂತಹ ರೂಪ
ವತಿಯೂ, ಪೀಯೂಷದಂತಹ ಮೃದುಭಾಷಿಣಿಯೂ ಆದಂಥಾ ನಾರೀ
ಮೂರ್ತಿಯು ಬಂದು ಮಾತೆಯ ಸ್ಥಾನವನ್ನು ಅಪಹರಿಸಿದಳು. ಮತ್ತು
ಅವಳು ಪುರುಷನ ಹೃದಯರೂಪೀ ರಾಜ್ಯದ ರಾಣಿಯಾಗಿ ಕುಳಿತಳು.
ಆಜ್ಞಾಕಾರಿಯಾದ ನೌಕರನಂತೆ ಪುರುಷನು ಆ ಅಬಲೆಯ ಚರಣಕಮಲ
ಗಳಿಗೆ ತನಗೆ ತಾನೇ ತನ್ನನ್ನು ಅರ್ಪಿಸಿಕೊಂಡು ಸಂಸಾರರಾಜ್ಯದಲ್ಲಿ

ವಿಹರಿಸತೊಡಗುವನು. ಹಗಲೆಲ್ಲಾ ಬೆವರಿಳಿಸಿಕೊಂಡು ನಾಲ್ಕು ದುಡ್ಡು ಸಿಕ್ಕಿದರೆ ಅದನ್ನು ತಂದು ಅಮೃತಭಾಷಿಣಿಯ ಚರಣಕಮಲಗಳಿಗೆ ಸಮರ್ಪಿಸುವನು. ತಾನು ಊಟ ಮತ್ತು ಬಟ್ಟೆಯಷ್ಟರ ಮಟ್ಟಿನ ಮಜೂರನಾಗಿ ಸಂಸಾರ ಯುದ್ಧದಲ್ಲಿ ಹೋಗಿ ಸೇರುವನು. ಅದೇ ನಾರಿಯು ಸಂಸಾರದ ಆಯವ್ಯಯದ ಖರ್ಚಿನ ಲೆಖ್ಖವನ್ನು ತಯಾರಿಸಿ ರಾಜಮಂತ್ರಿಯ ಕೆಲಸವನ್ನು ವರಿಸಲಾರಂಭಿಸುವಳು. ಗೃಹರಾಜ್ಯದಲ್ಲಿ ಅವಳ ಪ್ರಭುತ್ವವನ್ನೆ ಮಾನಿಸಲಾಯಿತು. ಸೂರ್ಯಕಿರಣವನ್ನು ಸಹಿಸಲಾರಳು. ಅದಕ್ಕೋಸ್ಕರ ಗೃಹರೂಪೀ ಕೋಟೆಯೊಳಗೆ ಸಿಂಹಾಸನವನ್ನು ಹಾಕಿಕೊಂಡು ದಾಸ-ದಾಸೀರೂಪದ ಸೈನ್ಯ-ಸಾಮಂತಾದಿಗಳಿಂದ ಸುತ್ತುವರೆಸಿಕೊಂಡು ಇರಲಾರಂಭಿಸಿದಳು. ಗೃಹದುರ್ಗದೊಳಗೆ ಕುಳಿತುಕೊಂಡೇ ಎಲ್ಲಾ ಕೆಲಸಕಾರ್ಯಗಳ ಪ್ರಬಂಧವನ್ನೂ ಮಾಡತೊಡಗಿದಳು. ಪುರುಷನು ಕಾಮಿನಿಯ ಕೈಯಲ್ಲಿ ಆಡುವ ಚೆಂಡಿನಂತೆ ನೆಗೆಯುತ್ತಾ ಹಾರುತ್ತಾ ಆನಂದದಿಂದ ದಿನ ಕಳೆಯುವನು. ದಾಸ ದಾಸಿಯರು ಗೃಹಿಣಿಯ ಆಜ್ಞಾಕಾರಿಗಳಾಗಿ ಹಗಲಿರುಳೂ ಅವಳ ಅಪ್ಪಣೆಯನ್ನು ಕಾಯಲಾರಂಭಿಸಿದರು. ಪುರುಷನು ಆ ಶಾಂತಿಮಯವಾದ ತರುವಿನ ನೆರಳಿನಲ್ಲಿ ತನ್ನ ಕಷ್ಟದಿಂದ ತಪ್ತವಾದ ಜೀವನವನ್ನು ಶಾಂತ ಮಾಡಿಕೊಳ್ಳುವನು. ಮೆಲ್ಲಮೆಲ್ಲನೆ ಪ್ರೌಢಳಾದಳು. ವೃದ್ಧಾವಸ್ಥೆಯು ಪ್ರಾಪ್ತವಾಯಿತು. ಭಗವತಿಯ ಅಂಶಸ್ವರೂಪರಾದ ಕನ್ಯೆ ಅಥವಾ ಪುತ್ರವಧುವು ಶೀತಲಛಾಯೆಯನ್ನು ಪಸರಿಸಿ ಪಿತೃ ಯಾ ಶ್ವಶುರನಿಗೆ ಸುಖವನ್ನು ಕೊಡುವಳು. ಪುರುಷನು ಪೂರ್ಣರೂಪದಿಂದ ಅವಳ ಮುಷ್ಟಿಯೊಳಗೆ ಸೇರಿಬಿಡುವನು. ಊಟ ಮತ್ತು ಬಟ್ಟೆಗೂ ಕೂಡ ಅವಳ ಅಧಿಕಾರವೇ ಆಗುವುದು. ಎಲೆ ನಾರೀ! ಹೇಳು, ನೋಡೋಣ, ಪುರುಷನು ಯಾವಾಗ ಯಾವ ಸಮಯದಲ್ಲಿ ಸ್ವಾಧೀನವಲ್ಲಿದ್ದನು?

ಭಾರತದ ಮಾತು ಹೋಗಲಿ ಬಿಡು. ಒಂದು ಸಲ ಬೆಳ್ಳಗಿರುವ ಮಂಜುಗಡ್ಡೆಯಿಂದ ಆಚ್ಛಾದಿತವಾದ ಪಶ್ಚಿಮ ಭೂಮಂಡಲದ ಕಡೆಗೆ ಒಮ್ಮೆ ದೃಷ್ಟಿ ಪಸರಿಸಿ ನೋಡು. ಅಲ್ಲಿ ನಾರೀ ಪೂಜೆಯು ಎಷ್ಟು

ಮಹಾ ಸಮಾರೋಹದಿಂದ ನಡೆಯುತ್ತಿದೆ. ಪಾಶ್ಚಿಮಾತ್ಯ ಪುರುಷರು "ಯಾ ದೇವೀ ಗೃಹರಾಜ್ಯೇಷು ಶಾಂತಿಪೀಯೂಷದಾಯಿನೀ | ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ಯಾ ದೇವೀ ಹೃತ್ಸರಾಜ್ಯೇಷು ಪೂರ್ಣಚಂದ್ರಸ್ವರೂಪಿಣೀ | ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||" ಇತ್ಯಾದಿ ಮಂತ್ರಗಳಿಂದ ನಿತ್ಯವೂ ದುರ್ಗಾಪಾರಾಯಣವನ್ನು ಮಾಡುತ್ತಾರೆ. ತಮ್ಮ ಸರ್ವಸ್ವವನ್ನು ಸಮರ್ಪಿಸಿ ನಾರಿಯ ಪಾದಪದ್ಮವನ್ನು ಪೂಜಿಸುತ್ತಾರೆ.

ಅವರು ನಡೆನುಡಿಯಲ್ಲಿಯೂ, ಜಾಗ್ರತ್ಸುಷುಪ್ತಿಯಲ್ಲಿಯೂ ಸದಾ ನಾರಿಯಾಜ್ಞೆಯನ್ನು ಶಿರಸಾ ವಹಿಸಿಕೊಂಡು ತಮ್ಮ ನಾರೀಮಯವಾದ ಜೀವನವನ್ನು ಕಳೆಯುತ್ತಾರೆ. ಆ ಸಭ್ಯ ಯೂರೋಪ್ ಸಮಾಜದಲ್ಲಿ ನಾರಿಯು ಸ್ವಾಧೀನಳೋ? ಯಾ ಪುರುಷನೋ? ಹೇಳು ನೋಡೋಣ.

ಸಂಸಾರರೂಪೀ ಮರುಳು ಊಷರಕ್ಷೇತ್ರವಾದ ಮರುಭೂಮಿಯಲ್ಲ ನಾರಿಯೇ ಏಕಮಾತ್ರ ಪುಷ್ಪವಾಟಿಕೆಯು. ಆದು ಉಷ್ಣಕಾಲದ ಮಧ್ಯಾಹ್ನದ ಸುಂಟುರುಘಾಳಿಯಲ್ಲಿ ಸುಡುತ್ತಿರುವ †"ಸಹಾರ"ಕ್ಕೆ ಸುಶೀತಲ ಜಲ, ಫಲ ಮತ್ತು ಛಾಯಾಮಯವಾದ §"ಓಸಿಸ್" ಆಗಿದೆ. ಹಸುರುಹಸುರಾದ ನವಪಲ್ಲವಗಳಿಂದ ತುದುರುತ್ತಿರುವ ಈ ನಾರೀಮಯವಾದ ವಾಟಿಕೆಯಲ್ಲಿ ಪುರುಷನು ವಸಂತಋತುವಿನ ಮೃದು, ಮಂದ, ಸುಗಂಧವಾಯುವಿನ ಸೇವನೆಯಿಂದ ಸ್ವರ್ಗಲೋಕದ ಅಮೃತದ ಸ್ವಾದವನ್ನು ಪಡೆಯುತ್ತಾನೆ. ನಾರಿಯೇ ಪುರುಷನ ಸಂಜೀವಿನೀ ಸುಧೆಯು. ನಾರಿಯೇ ಪುರುಷನ ಶಕ್ತಿಯು, ನಾರಿಯೇ ನರನ ಪ್ರಾಣವು.

ಈ ಸಂಸಾರ ಸ್ಮಶಾನದಲ್ಲಿ ನಿರಂತರವೂ ಚಿತೆಯಿಂದ ಹೊಗೆಯೇಳುತ್ತದೆ. ಗೃಧ್ರ, ಕಾಗೆ ಮೊದಲಾದವು ಕೂಗಿಕೂಗಿ ಹಾಹಾಕಾರ ಮಾಡುತ್ತವೆ. ಬಹಳ ಬಿರುಸಾದ ಸುಂಟುರುಘಾಳಿಯು ಬಂದು ಈ

---

† ಆಫ್ರಿಕೆಯ ಮರುಭೂಮಿ. ಅಲ್ಲಿ ಬಹಳ ದೂರದ ವರೆಗೂ ನೀರು ಸಿಗುವುದಿಲ್ಲ.

§ ಮರುಭೂಮಿಯೊಳಗಿನ ಜಲಾಶಯ ಸಹಿತವಾದ ಉಪವನ.

ಸಂಸಾರವನ್ನು ಬೇರಿನಿಂದಲೇ ಅದರಿಸಿಬಿಡುತ್ತದೆ. ಆದರೆ ಈ ಚಿತಾ ಕ್ಷೇತ್ರದಲ್ಲಿ, ಈ ಮೈದಾನಿನಲ್ಲಿ ನೀನು ಎಳೆಎಳೆದಾದ ಎಲೆಗಳಿಂದ ಮುಚ್ಚಿರುವ ಮಹಾ ತರುವರಕ್ಕೆ ಸಮಾನವಾಗಿ ಸುಶೀತಲವಾದ ನೆರಳನ್ನು ಕೊಟ್ಟು ಬೆಂಕಿಯಿಂದ ಸುಡುತ್ತಿರುವ ಹೆಣಕ್ಕೆ ಸಮಾನನಾದ ಪುರುಷನ ತಪ್ತಹೃದಯಕ್ಕೆ ಶಾಂತಿಯನ್ನುಂಟುಮಾಡುತ್ತೀ. ಎಲೆ ನಾರಿ! ನಿನ್ನ ಪೂಜೆ ಯಾಗದಿದ್ದರೆ ಇನ್ನು ಯಾರಿಗೆ? ಮನೆಮನೆಯಲ್ಲಿಯೂ ನಿನ್ನ ಪೂಜೆಯೇ ಆಗುತ್ತದೆ. ನೀನೇ ಆದ್ಯಶಕ್ತಿಯ ಅಂಶಸ್ವರೂಪಿಣಿ. ಶಕ್ತಿ ಇಲ್ಲದಿದ್ದರೆ ಪುರುಷನು ಹೆಣವಾಗುತ್ತಾನೆ. ಮತ್ತು ಶಕ್ತಿಯ ಆಧಾರದಿಂದಲೇ ಪುರುಷನು ಶವದಿಂದ ಶಿವನಾಗುತ್ತಾನೆ.

ಎಲೆ ನಾರಿ! ಪುರುಷನು ದೇಹವು. ನೀನು ಆ ದೇಹದಲ್ಲಿ ಚೈತನ್ಯಮಯವಾದ ಆತ್ಮವು. ಪುರುಷನು ಪಂಜರವು. ನೀನು ಆ ಪಂಜರದಲ್ಲಿರುವ ಗಿಳಿಯು. ಪುರುಷನು ಗೃಹವು. ನೀನು ಆ ಗೃಹದ ಅಧಿಷ್ಠಾತ್ರಿದೇವಿಯು. ಪುರುಷನು ಅರಬ್‌ದೇಶದ ರೇಗಿಸ್ತಾನವಾದ ಮರುಭೂಮಿ. ನೀನು ಆ ಮರುಭೂಮಿಯಲ್ಲಿ ವೇಗವತೀ ನದಿಯು. ಪುರುಷನು ಘನಘೋರವಾದ ಮೋಡಗಳಿಂದ ತುಂಬಿದ ಕೃಷ್ಣಪಕ್ಷದ ರಾತ್ರಿಯು. ನೀನು ಶರತ್ಕಾಲದ ಪೂರ್ಣಿಮಾ ಚಂದ್ರನು. ಪುರುಷನು ಸಂಸಾರಕಾನನದಲ್ಲಿ ಮುಳ್ಳಿನಗಿಡವು. ನೀನು ಅದರಲ್ಲಿನ ಜಾಜಿಯು, ಮಲ್ಲಿಗೆಯು, ಗುಲಾಬಿಯು, ಸಂಪಗೆಯು. ಎಲೇ ನಿನ್ನ ಜೊತೆಯಲ್ಲಿ ನನ್ನ ತುಲನೆಯು ಎಂದಿಗೂ ಆಗಲಾರದು. ಅಬಲೆಯಾದಾಗ್ಯೂ ನೀನು ಕ್ಷಣಕ್ಷಣದಲ್ಲಿಯೂ ಪ್ರಬಲೆಯು.

## ನಾರೀಪೂಜೆ.

ನಾರಿಯು ಜಗತ್ತಿನಲ್ಲಿ ಪೂಜನೀಯಳು. ಬಹಳವಾಗಿ ಎಲ್ಲಾ ಸಭ್ಯಸಮಾಜಗಳಲ್ಲಿಯೂ ಯಾವದಾದರೊಂದು ರೂಪದಲ್ಲಿ ನಾರೀ ಪೂಜೆಯು ಪ್ರಚಲಿತವಾಗಿದೆ.

ನರ ಮತ್ತು ನಾರೀ ಇವರಿಬ್ಬರ ಕರ್ತವ್ಯದಲ್ಲಿಯೂ, ಜೀವನೋದ್ದೇಶಗಳಲ್ಲಿಯೂ ಏಕತಾ, ಮತ್ತು ಭಿನ್ನತೆಯು ಎರಡೂ ಕಾಣಬರುತ್ತದೆ. ಪುರುಷನು ಮನುಷ್ಯಜಾತಿಯ ಮಸ್ತಿಷ್ಕವು. ನಾರಿಯು ಅದರ ಹೃದಯವು. ಮಸ್ತಿಷ್ಕವು ಚಿಂತಿಸುತ್ತದೆ. ಕೈಯು ಕೆಲಸಮಾಡುತ್ತದೆ. ಆದರೆ ಹೃದಯವು ಅವುಗಳನ್ನು ನಡಿಸುತ್ತದೆ. ಆದಕಾರಣ ಹೃದಯದ ಸ್ಥಾನವು ಶ್ರೇಷ್ಠವು. ಆದುದರಿಂದ ಹೃದಯರೂಪಿಣೀ ನಾರಿಯು ಎಲ್ಲರಿಗೂ ಪೂಜ್ಯಳು.

ನರನ ಪ್ರಧಾನವಾದ ಸಹಾಯಕಳು ನಾರಿಯು. ಸಂಸಾರಕ್ಷೇತ್ರದ ಧರ್ಮಜೀವನದಲ್ಲಿ ಇಂಥಾ ಸಹಾಯಕರು ಬೇರೆ ಯಾರೂ ಒದಗುವುದಿಲ್ಲ. ಎಷ್ಟು ದಿನ ಸಭ್ಯಸಮಾಜದಲ್ಲಿ ದಯಾ, ಪ್ರೇಮ, ತ್ಯಾಗಶೀಲತೆ, ವೈರಾಗ್ಯಾದಿಗಳ ಆದರಣೆಯಾಗುವುದೋ, ಅಷ್ಟು ದಿನವೂ ನಾರಿಯು ಜಗತ್ತಿನಲ್ಲಿ ಪೂಜ್ಯಳಾಗಿರುವಳು.

ಎಲ್ಲಾ ಸಭ್ಯಸಮಾಜಗಳಲ್ಲಿಯೂ ನಾರಿಯ ಮೇಲೆ ಅತ್ಯಾಚಾರ ನಡಿಸುವುದೆಂದರೆ ಘೋರವಾದ ಅನ್ಯಾಯವಾಗಿ ಎಣಿಸಲ್ಪಡುತ್ತದೆ. ಕಾರಣ; ನಾರಿಯು ಭಕ್ತಿಪಡೆಯಲು ಯೋಗ್ಯಳು. ಅವಳ ಹೃದಯದ ಸ್ನೇಹ ಮತ್ತು ಸ್ತನ್ಯ (ಹಾಲು) ನಮ್ಮನ್ನು ಜೀವಿತರನ್ನಾಗಿ ಮಾಡುತ್ತವೆ. ಮನುಷ್ಯರನ್ನು ಮನುಷ್ಯರನ್ನಾಗಿ ಮಾಡುತ್ತವೆ.

ಈ ಕಾರಣದಿಂದ ನಾರಿಯಲ್ಲಿ ಭಕ್ತಿಮಾಡದಿರುವುದು ಮಹಾಪಾಪವು. ನೀನು ಯಾವ ಕಾರಣದಿಂದಲಾದರೂ ನನ್ನ ಶರೀರದ ಮೇಲೆ ಬಲಪ್ರಯೋಗಮಾಡು. ಅದರಿಂದ ಏನೂ ಹಾನಿಯಿಲ್ಲ. ಆದರೆ ನಾರಿಯ ಶರೀರದ ಮೇಲೆ ಕೈ ಎತ್ತುವುದು ಬಹಳ ದುಷ್ಟಕೆಲಸವಾಗಿದೆ.

ಯೂರೋಪಿನ ಸಭ್ಯಜಾತೀಯರು ದಿನದಿನಕ್ಕೂ ನಾರೀಪೂಜೆಯನ್ನು ಮಾಡಲು ಕಲಿಯುತ್ತಾರೆ. ಆದರೆ ಅವರು ನಾರಿಗೆ ಪುರುಷನಜೊತೆಯಲ್ಲಿ ಸರಿಸಮಾನವಾದ ಅಧಿಕಾರವನ್ನು ಕೊಡಲಿಚ್ಛೈಸುವುದಿಲ್ಲವೆಂಬುದು ದುಃಖದ ಮಾತಾಗಿದೆ. ಈ ವಿಷಯದಲ್ಲಿ ಪ್ರಾಚೀನ ಹಿಂದೂಗಳ

ಭಾವನೆಯು ಎಷ್ಟು ಶ್ರೇಷ್ಠ ಮತ್ತು ಸುಂದರವಾಗಿದೆ. ಯೂರೋಪಿನ ಭಾವನೆಯು ಸರಿಯಾಗಿ ನನ್ನ ತಿಳುವಳಿಕೆಗೆ ಬರುವುದಿಲ್ಲ. ಆದರೂ ನಾರೀಭಕ್ತಿಯು ಯೂರೋಪಿನವರ ಸ್ವಭಾವಸಿದ್ಧವು. ಈ ಭಕ್ತಿಯು ನಮ್ಮಲ್ಲಿ ಈ ಸಮಯದಲ್ಲಿಲ್ಲ. ಇದಕ್ಕೆ ಸಾಮಾಜಿಕ ಮತ್ತು ಐತಿಹಾಸಿಕ ಕಾರಣಗಳು ಬಹಳ ಇವೆ.

ಆದರೆ ಪ್ರಾಚೀನಕಾಲದ ಹಿಂದೂಗಳಂತೆ "ಮಾತೃವತ್ ಪರದಾರೇಷು" ಎಂಬದರ ಶಿಕ್ಷಣವನ್ನು ಯಾರು ಕೊಟ್ಟಿರುತ್ತಾರೆ? ಇಷ್ಟೇ ಅಲ್ಲ. ಜನನಿಯು "ಸ್ವರ್ಗಾದಪಿ ಗರೀಯಸೀ" ಎಂದಿದೆ. ತನ್ನ ಪತ್ನಿಯು ಹೊರತು ಕುಟುಂಬದ, ಹೊರಗಿನ ಸ್ತ್ರೀಯರು "ಮಾತೃವತ್" ಆಗಿರುತ್ತಾರೆ. ತನ್ನ ಕನ್ಯೆಯು "ಅತಿಯತ್ನತಃ ರಕ್ಷಣೀಯಾ ಮತ್ತು ಪಾಲನೀಯಾ" ಆಗಿದೆ. ತನ್ನ ಸ್ತ್ರೀಯಲ್ಲಿ ಸದಾ ಶ್ರದ್ಧೆಯಿಂದಲೂ, ಭಕ್ತಿಯಿಂದಲೂ, ಮತ್ತು ಯತ್ನದಿಂದಲೂ ನಡೆದುಕೊಳ್ಳಬೇಕೆಂಬ ಅನುಶಾಸನವಿದೆ.

ಅವಳನ್ನು "ಮಾತೃವತ್ ಪಾಲಯೇತ್ ಸದಾ" ಇಷ್ಟರ ವಿನಹ ನಾರಿಯನ್ನು ತಿಳಿದು ದೇವತೆಯಂತೆ ಪೂಜಿಸುವ ವಿಧಿಯೂ ಇರುತ್ತದೆ.

ಈ ಆಜ್ಞೆಗಳನ್ನೆಲ್ಲಾ ಮರೆತು ಜನನೀ, ಭಗಿನೀ, ದುಹಿತಾ, ಪತ್ನೀ ಮತ್ತು ಸಾಧಾರಣ ನಾರಿಯರಲ್ಲಿ ಸಹ ಪ್ರತಿ ಅನುಚಿತ ಆಚರಣೆಮಾಡುವುದರಿಂದ ಪುರುಷನು ಮಹಾ ಪಾತಕಿಯಾಗುತ್ತಾನೆ. ಅವನು ಅಶಿಷ್ಟಾಚಾರದ ದೋಷದಿಂದ ದುಷ್ಟನಾಗುವುದಲ್ಲದೆ ಧರ್ಮದಿಂದಲೂ ಪತಿತನಾಗುತ್ತಾನೆ. ನನ್ನ ತಿಳುವಳಿಕೆಯಲ್ಲಿ ಇದಕ್ಕಿಂತ ಹೆಚ್ಚಾದ ಉಚ್ಚಶ್ರೇಣಿಯ ನಾರೀಭಕ್ತಿಯು ಇನ್ನು ಯಾವ ದೇಶದಲ್ಲಿಯೂ ಯಾವಾಗಲೂ ಕಾಣಬರುವದಿಲ್ಲ.

ನಾರಿಯು ಸಂಸಾರದ ಸಹಾಯವನ್ನೂ ಧರ್ಮದ ಸಹಾಯವನ್ನೂ ಮಾಡುವವಳಾಗಿದ್ದಾಳೆ. ಗೃಹಿಣಿಯೇ ಗೃಹಸರ್ವಸ್ವವು. ಎಲ್ಲಿ ಅವಳ ಅನಾದರವಾಗುತ್ತದೋ, ಅಲ್ಲಿಂದ ಲಕ್ಷ್ಮಿಯು, ಧರ್ಮದ ಮತ್ತು ಸುಖದ

ಆವಾಸವು ಎದ್ದುಹೋಗುತ್ತದೆ. ನಿಜಪತ್ನಿಯೇ ಸಹಧರ್ಮಿಣಿಯು. ಧರ್ಮಜೀವನ್ನದ ಶ್ರೇಷ್ಠವಾದ ಸಹಾಯಕಳು.

ಕುಟುಂಬದ ಅಥವಾ ಹೊರಗಿನ ನಾರಿಯರನ್ನು ದರ್ಶನಮಾಡಿದ ಕೂಡಲೇ ಮನಸ್ಸಿನಲ್ಲಿ "ಮಾತೃವತ್" ಎಂದು ತಿಳಿದು ಭಕ್ತಿಮಾಡಿ ಮನಸ್ಸಿನಲ್ಲೇ ಅವಳ ಪವಿತ್ರವಾದ ಚರಣಕಮಲಗಳಿಗೆ ಪ್ರಣಾಮವನ್ನು ಮಾಡುವ ವಿಧಿಯಿರುತ್ತದೆ. ಇದು ಮಹಾದೇವನ ಶಾಸನವು. ಅಭ್ಯಾಸ ಮಾಡಿಕೊಳ್ಳಿ. ಮೂರು ನಾಲ್ಕು ವರ್ಷಗಳಲ್ಲಿಯೇ ನಾರೀಮಾತ್ರರನ್ನು ನೋಡಿದ ಕೂಡಲೇ ಮನಸ್ಸಿನಲ್ಲಿ ತನಗೆತಾನೇ ಮಾತೆಯ ಭಾವವು ಉದಿತವಾಗುತ್ತದೆ ಎಂಬುದನ್ನು ಅಭ್ಯಾಸದಿಂದ ತಿಳಿದುಕೊಳ್ಳಿ.

ನನ್ನ ಸಣ್ಣದಾದ ಬುದ್ಧಿಯಲ್ಲಿ ಇದಕ್ಕಿಂತ ಶ್ರೇಷ್ಠವಾದ ನಾರೀ ಭಕ್ತಿಯು ಯಾ ಪವಿತ್ರವೂ ಮತ್ತು ಮಧುರವಾದ ಸಾಧನವು ಬೇರೆ ಇರುವು ದಿಲ್ಲ. ಇದೇ ಬಹಳ ದೊಡ್ಡ ಶಿಕ್ಷಣವು. ಮಹಾಜನರ ಮಹಾಪ್ರಾಣ ವಾದ ಮಹಾದೇವನ ಶಿಕ್ಷಣವು. ದೇವತೆಗಳು ಭಾರ್ಯೆಯರನ್ನು ಶಿರ ದಲ್ಲಿ ಮತ್ತು ಹೃದಯದಲ್ಲಿ ಧಾರಣೆಮಾಡಿಕೊಂಡಿರುತ್ತಾರೆ ಎಂದು ತಿಳಿದು ಬರುತ್ತದೆ. ಇಂಥಾ ಕೈಲಾಸಪತಿ ಮಹಾದೇವನ ಮುಂದೆಯೇ ಭಕ್ತರಾದ ಜನರು ನಮಸ್ಕರಿಸಲು ಯೋಗ್ಯರು. ಇಂಥಾ ದೊಡ್ಡ ಮೇಧಾವಿಯಾದ ಯೋಗೀಶ್ವರರು ಭಾರ್ಯೆಯರನ್ನು ಶಿರಸ್ಸಿನಲ್ಲಿಯೂ, ಹೃದಯದಲ್ಲಿಯೂ ಧಾರಣೆಮಾಡಿಕೊಂಡಿರುತ್ತಾರೆ. ಮತ್ತು ಎಂದಿಗೂ ಬಲಭಾಗದಲ್ಲಿ ಕೂಡಿಸಿಕೊಳ್ಳುವುದಿಲ್ಲ.

ಮಹಾದೇವನ ಕಥೆಯನ್ನು ಬಹಳ ಜನರು ಸುಳ್ಳೆಂದು ತಿಳಿಯು ತ್ತಾರೆ. ಆದರೆ ಈ ಕಥೆಯ ಭಾವನೆಯು ಬಹಳ ಶ್ರೇಷ್ಠವೂ, ಬಹಳ ಜ್ಞಾನಪರವೂ ಆಗಿದೆ. ಇದರಲ್ಲಿ ಸತ್ಯವಿಲ್ಲವೆಂದು ಯಾರು ಹೇಳುವರು? ಭಾರತವಾಸಿಯರಾದ ನಾವುಗಳು ಅಬಲೆಯರ ಸನ್ಮಾನರಕ್ಷಣೆಯ ಬದ ಲಿಗೆ "ನಾಇಟ್ ಎರೆಂಟ್" ಎಂಬ ನಾರೀಭಕ್ತರ ಸಮೀಪ ಕೂತು ಕೊಂಡು ನಾರೀಪೂಜೆಯ ಶಿಕ್ಷಣವನ್ನು ಪಡೆಯದೆ, ಧರ್ಮಜಗತ್ತಿನ ಶಿಖರದಲ್ಲಿ ವಿರಾಜಮಾನನೂ, ನಿತ್ಯ ಯೋಗಮಗ್ನನೂ ಆದ ಮಹಾ

ದೇವನ ಚರಣಕಮಲದಲ್ಲಿ ಕುಳಿತುಕೊಂಡು ನಾರೀಭಕ್ತಿಯನ್ನು ಕಲಿತರೆ ಎಷ್ಟೋ ಒಳ್ಳೇದಾಗಿರುವುದು.

## ನಾರಿಯ ಮಹತ್ವ.

ನಾರಿಯು ಮಾತಾ, ಪತ್ನೀ, ಭಗಿನೀ, ಪುತ್ರೀ, ಸೇವಿಕಾ ಮೊದಲಾದ ರೂಪದಿಂದ ಸಂಸಾರವನ್ನು ರಕ್ಷಿಸುತ್ತಾಳೆ. ನಾರಿಯು ಎಲ್ಲಾ ರೂಪಗಳಲ್ಲಿಯೂ ಪರಮಾತ್ಮನ ನಿಜಸ್ವರೂಪದ ಮೂರ್ತಿಯು. ಪರಮಾತ್ಮನು ಒಂದು ಸಲ ಪಿತೃರೂಪದಿಂದ ಜಗತ್ತಿನ ಪಾಲನೆಯನ್ನು ಮಾಡುತ್ತಾನೆ. ಒಂದು ಸಲ ಮಾತೃರೂಪದಿಂದ ಪೋಷಿಸುತ್ತಾನೆ. ಪರಮಾತ್ಮನ ಪ್ರಕೃತಿಯಲ್ಲಿ ನಾರಿಯೇ ಮಾತೃಸ್ವರೂಪಳು. ಎಲ್ಲಾ ದೇಶಗಳಲ್ಲಿಯೂ, ಎಲ್ಲಾ ಶಾಸ್ತ್ರಗಳಲ್ಲಿಯೂ ನಾರೀಜಾತಿಯ ಮಹತ್ವವು ಹೆಚ್ಚಾಗಿರುತ್ತದೆ. ದೊಡ್ಡದೊಡ್ಡ ಧರ್ಮಾತ್ಮರಾದ ಜ್ಞಾನಿಗಳು ಇದರ ಸಂಬಂಧವಾಗಿ ಎಲ್ಲಾ ಕಾಲಗಳಲ್ಲಿಯೂ ಸಾಧುವಚನವನ್ನು ಹೇಳಿರುತ್ತಾರೆ. ಅದು ಹೇಗಂದರೆ—''ಮಾತಾ ಗುರುತರಾ ಪೃಥ್ವ್ಯಾಃ'' ಅರ್ಥಾತ್ ಮಾತೆಯು ಪೃಥ್ವಿಗಿಂತಲೂ ದೊಡ್ಡವಳು. ''ಸ್ತ್ರಿಯಃ ಶ್ರಿಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ'' ಸ್ತ್ರೀಯು ಗೃಹದ ಶ್ರೀಯು. ಅಂದರೆ ಲಕ್ಷ್ಮಿಯು. ಸ್ತ್ರೀಗೂ ಶ್ರೀಗೂ ಯಾವ ಅಂತರವೂ ಇಲ್ಲ. ''ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ'' ಎಲ್ಲಿ ನಾರಿಯರ ಪೂಜೆಯಾಗುತ್ತದೋ (ಮಾನಿಸಲ್ಪಡುತ್ತಾರೋ), ಆ ಸ್ಥಾನವು ದೇವತೆಗಳಿಗೂ ಸಹ ಪ್ರಿಯವಾಗಿರುತ್ತದೆ (ವಾಸಿಸುತ್ತಾರೆ).

ಚೀನದೇಶದಲ್ಲಿ ''ಕನ್‌ಫ್ಯೂಶಸ್'' ನಾಮದ ಒಬ್ಬ ದೊಡ್ಡ ಜ್ಞಾನಿಗಳು ಇದ್ದರು. ಅವರ ವಚನವಿದೆ. ಏನಂದರೆ—''ನಾರಿಯೇ ಸಂಸಾರದ ಸಾರವು.''

ಯೂರೋಪಿನಲ್ಲಿ ಯಾವ ಈಸಾಯಿ ಧರ್ಮವು ಪ್ರಚಲಿತವಾಗಿ ದೆಯೋ, ಅದರ ಸಂಸ್ಕಾರವನ್ನು "ಮಾರ್ಟಿನ್ ಲೂಥರ್" ಎಂಬ ಹೆಸ ರಿನ ಒಬ್ಬ ಪ್ರತಾಪೀ ಪುರುಷರು ಮಾಡಿರುತ್ತಾರೆ. ಲೂಥರರ ಸಮ್ಮತಿ ಏನಂದರೆ—"ದಯೆಯ ಆಧಾರವಾಗಿರುವ ಕಾಮಿನಿಯರ ಕೋಮಲ ಹೃದಯದಿಂದ ಹೆಚ್ಚಾಗಿ ಸಂಸಾರದಲ್ಲಿ ಕೋಮಲತರವು ಎರಡನೇದು ಯಾವ ವಸ್ತುವೂ ಇರುವುದಿಲ್ಲ."

ವಿದ್ವಾನ್ "ಈಮರ್ಸನ್"ನ ಮತವು ಏನಂದರೆ "ಸುಂದರಿ ಯಾದ ನಾರಿಯು ಅನುಷ್ಠಾನಿಕಕವಿ, ಮತ್ತು ಭೀಷಣಸ್ವಭಾವದ ಪತಿಯ ನ್ನಾದರೂ ವಶಮಾಡಿಕೊಳ್ಳುತ್ತಾಳೆ. ಮತ್ತು ಎಲ್ಲಿ ಹೋಗುತ್ತಾಳೋ, ಅಲ್ಲಿ ಆಶೆಯಿಂದ ಪೂರ್ಣವಾಗಿ ಮಾಡುತ್ತಾಳೆ. ಅವಳಿಂದ ಎಷ್ಟೋ ಆಕಾಶವಾಣಿಯು ಕೇಳಬರುತ್ತದೆ. ಎಷ್ಟೋ ಮಧುರ ಭಾವನೆಯು ಅರಳುತ್ತದೆ."

ಸುಪ್ರಸಿದ್ಧ ಫರಾಸೀಸೀ ಲೇಖಕ "ವಾಲ್‌ಟೇಯರ್"ನ ಕಥನ ವೇನಂದರೆ—"ನಾರಿಯೇ ನಮ್ಮಗಳಿಗೆ ಶಿಷ್ಟಾಚಾರದ ಶಿಕ್ಷಣೆಯನ್ನು ಕೊಡುತ್ತಾಳೆ."

ಇನ್ನೊಬ್ಬ ಫರಾಸೀಸೀ ಪಂಡಿತ "ಮಲಹಾರ್ಬ"ರು ಹೇಳಿರು ತ್ತಾರೆ. ಏನಂದರೆ—"ಜಗತ್ತಿನಲ್ಲಿ ಸುಂದರವಾದ ವಸ್ತುವು ಎರಡೇ ಇರುವುದು. ನಾರೀ ಮತ್ತು ಗುಲಾಬಿ. ಮತ್ತು ರುಚಿಯಾದ ವಸ್ತುವು ಎರಡೇ. ನಾರೀ ಮತ್ತು ತರ್‌ಬೂಜ."

ಡಾಕ್ಟರ್ "ಕ್ಲಾರ್ಕ" ಸಾಹೇಬರು ಹೇಳಿರುತ್ತಾರೇನಂದರೆ— "ಪುರುಷನು ನಾರಿಗಿಂತ ಶ್ರೇಷ್ಠನಲ್ಲ. ಮತ್ತು ನಾರಿಯು ಪುರುಷನಿ ಗಿಂತ ಶ್ರೇಷ್ಠಳಲ್ಲ. ಇಬ್ಬರ ಸಂಬಂಧವೂ ಸರಿಸಮಾನವಾಗಿದೆ."

ಅಮೇರಿಕದ ಎರಡನೇ ಪ್ರೆಸಿಡೆಂಟ್ "ಜಾನ್ ಆದಮ್ ಸಾಹೇಬ್" ರು ಹೇಳಿರುವುದೇನಂದರೆ—"ನಾನು ಹ್ಯಾಗೆ ಹ್ಯಾಗೆ ಇದ್ದೇನೆಯೋ, ಅದನ್ನೆಲ್ಲಾ ನನ್ನ ಮಾತೆಯ ಪ್ರಸಾದದಿಂದ ಪಡೆದಿರುವುದು."

ಮಹಾವೀರ "ಸಿಕಂದರ"ರ ಮಾತೆಯು ಬಹಳ ಉಗ್ರಪ್ರಕೃತಿಯವಳಾಗಿದ್ದಳು. ಆದರೆ ಸಿಕಂದರನು ಅವಳನ್ನು ಬಹಳ ಸನ್ಮಾನಿಸುತ್ತಿದ್ದನು. ಒಂದುಸಲ ಅವನ ಮಂತ್ರಿಯು ಆತನನ್ನು ಕುರಿತು ತಾವು ರಾಜಧಾನಿಯಿಂದ ಹೋದಮೇಲೆ ತಮ್ಮ ಮಾತೆಯು ಬಹಳ ಅತ್ಯಾಚಾರ ಮಾಡುತ್ತಾಳೆ ಎಂಬದಾಗಿ ಹೇಳಿದನು. ಅದಕ್ಕೆ ಸಿಕಂದರನು ಏನು ಹೇಳಿದನೆಂದರೆ—"ನನ್ನ ತಾಯಿಯ ಒಂದು ಬಿಂದು ಅಶ್ರುವಿನಲ್ಲಿ ನಿನ್ನಂಥಾ ನೂರಾರು ಜನರು ಮುಳುಗಿಹೋದಾರೆಂಬುದು ನಿನಗೆ ತಿಳಿದಿಲ್ಲವೇ."

ನೆಪೋಲಿಯನ್ "ಬೋನ್‌ಪಾರ್ಟ"ನ ವಚನವಿರುವುದೇನಂದರೆ—"ನನಗೆ ಸುಮಾತೆಯನ್ನು ಕೊಡಿರಿ. ಆಗ ನಾನು ನಿಮ್ಮನ್ನೆಲ್ಲಾ ಒಳ್ಳೇ ಸಭ್ಯಜಾತಿಯವರನ್ನಾಗಿ ಮಾಡುವೆನು."

"ಜಾರ್ಜ ಹರ್ಬರ್ಟ"ಸಾಹೇಬರ ವಚನವೇನಂದರೆ "ಒಬ್ಬಳು ಉತ್ತಮಳಾದ ಮಾತೆಯು ನೂರು ಶಿಕ್ಷಕರಿಗೆ ಸಮಾನಳಾಗುತ್ತಾಳೆ. ಚುಂಬಕವು (ಸೂಜಿಕಲ್ಲು) ಲೋಹವನ್ನು ಹೇಗೆ ಆಕರ್ಷಿಸುತ್ತದೋ, ಧ್ರುವತಾರೆಯು ಎಲ್ಲರ ದೃಷ್ಟಿಯನ್ನು ಹೇಗೆ ಆಕರ್ಷಣೆಮಾಡಿಕೊಳ್ಳುತ್ತದೋ, ಹಾಗೆಯೇ ಮನೆಯಲ್ಲಿ ತಾಯಿಯು ಎಲ್ಲರನ್ನು ಆಕರ್ಷಿಸಿಕೊಂಡು ಎಲ್ಲರನ್ನು ಕಾಪಾಡುತ್ತಿರುತ್ತಾಳೆ."

"ಬೇಕನ"ನು ಬಾಲಕರಲ್ಲಿ ಮಾತೆಯರ ನೋಡುವಿಕೆಯ ಚಿತ್ತವನ್ನು ತೆಗೆಯುವ ವೃತ್ತಿಯನ್ನು ಇಡೀ ಜಗತ್ತಿನ ಶಿಕ್ಷಣದ ಬುನಾದಿಯನ್ನಾಗಿ ತಿಳಿದಿದ್ದಾನೆ.

"ಸ್ಮಾಇಲ್ಸ"ಸಾಹೇಬರು ನೀತಿವಿಷಯದ ಉದ್ದೇಶಪೂರ್ಣ ಗ್ರಂಥಗಳನ್ನು ಎಷ್ಟೋ ಮಾಡಿದ್ದಾರೆ. ಅವರು ಹೇಳುವುದೇನಂದರೆ—"ಪಿತನಿಗಿಂತಲೂ ಮಾತೆಯು ನಡೆನುಡಿ ಕಲಿಸುವುದರಲ್ಲಿಯೂ, ಮತ್ತು ಕೆಲಸಕಾರ್ಯಗಳ ವಿಮರ್ಶೆಯನ್ನು ಕೊಡುವುದರಲ್ಲಿಯೂ ಅಧಿಕ ಶಕ್ತಿಯುಳ್ಳವಳಾಗಿರುತ್ತಾಳೆ. ಗೃಹವೇ ಅವಳ ರಾಜ್ಯವು. ಅಲ್ಲಿ ಅವಳ ಪೂರ್ಣ ಅಧಿಕಾರವಿದೆ. ಕೋಮಲಸ್ವಭಾವದ ಪ್ರಜೆಗಳ ಮೇಲೆ ಅವಳ ಏಕಛತ್ರ

ರಾಜ್ಯವು ನಡೆಯುವುದು. ಅವಳ ಪ್ರಜೆಗಳು ತಮ್ಮ ಎಲ್ಲಾ ಅವಶ್ಯಕ ವಸ್ತುಗಳಿಗೋಸ್ಕರ ಮಾತೆಯ ಮುಖವನ್ನೇ ನೋಡಬೇಕಾಗುತ್ತದೆ. ಮಾತೆಯೇ ಎಲ್ಲಾ ಸಮಯದಲ್ಲಿಯೂ ಅವರ ನೇತ್ರಗಳ ಮುಂದಿದ್ದು ಅವರಿಗೆ ಆದರ್ಶಳಾಗಿರುತ್ತಾಳೆ. ಅವರೆಲ್ಲರೂ ಅವಳ ಎಲ್ಲಾ ಆಚರಣೆಗಳ ಮಾದರಿಯನ್ನೆ ಕಲಿಯುತ್ತಾರೆ. ಮಾತೆಯ ಸ್ನೇಹವು ಮನುಷ್ಯನಿಗೋಸ್ಕರ ಈಶ್ವರನ ಸಾಕ್ಷಾತ್ ದಯೆಯ ಚಿಹ್ನೆಯಾಗಿರುತ್ತದೆ.''

''ಎಮರ್ಸನ್'' ಸಾಹೇಬರು ಬರೆದಿರುತ್ತಾರೆ. ''ಉತ್ತಮ ನಾರೀ ಸಮೂಹದ ಗುಣದಿಂದ ಸಭ್ಯತೆಯ ಅಭ್ಯುದಯವು ಬಹಳವಾಗುತ್ತದೆ.''

''ಜಾನ್ ಫ್ರೈದಲ್ಫ''ರೆಂಬವರೊಬ್ಬರು ರಾಜನೀತಿಪುರುಷರಾಗಿದ್ದರು. ಅವರು ಒಂದು ದಿನ ನಾಸ್ತಿಕತಾರೂಪದ ಮಹಾಪಾಪವನ್ನು ಮಾಡಲು ತಯಾರಾಗಿದ್ದರು. ಆದರೆ ಅಕಸ್ಮಾತ್ ಅವರಿಗೆ ತನ್ನ ಬಾಲ್ಯಾವಸ್ಥೆಯಲ್ಲಿಯ ಮಾತೆಯ ಈ ಉಪದೇಶದ ''ಯಾವ ನಮ್ಮ ತಂದೆಯು ಸ್ವರ್ಗದಲ್ಲಿದ್ದಾರೋ'' ನೆನಪಾಯಿತು. ಇದೇ ಮಾತನ್ನು ಯೋಚಿಸಿ ಅವರ ಮನಸ್ಸು ಆ ಪಾಪಕರ್ಮದಿಂದ ನಿವೃತ್ತವಾಯಿತು.

ಸಂಗೀತಶಾಸ್ತ್ರದ ಗ್ರಂಥಕಾರ ''ಗೇಟೇ''ನರು ''ಉತ್ತಮ ಮಾತೆಯನ್ನು ಸೃಷ್ಟಿಯ ಎಲ್ಲಕ್ಕೂ ಉತ್ತಮ ವಸ್ತುವಾಗಿ'' ಹೇಳಿರುತ್ತಾರೆ.

ಒಬ್ಬ ''ಫರಾಸೀಸಿ''ಯ ಹೇಳಿಕೆಯು ಏನಂದರೆ -''ನಾರಿಯ ವಿನಹ ಪುರುಷನು ದುಷ್ಟ, ಭಯಾವಹವಾದ ಕಾಡುಮೃಗಕ್ಕೆ ಸಮವಾಗಿರುತ್ತಾನೆಂದು.''

ಪಂಡಿತವರ ''ಸ್ಯಾಮುವಲ್ ಜಾನ್‌ಸನ್''ರು ''ರಾಸ್‌ಲಟ್'' ಎಂಬ ಹೆಸರಿನ ತಮ್ಮ ಪುಸ್ತಕದಲ್ಲಿ ಮಾತೃಸ್ನೇಹದ ಬಹಳ ದೊಡ್ಡ ವಿವರವನ್ನು ಮಾಡಿರುತ್ತಾರೆ.

ಕವಿ ''ಕಪೂರ''ರು ತಮ್ಮ ಮಾತೆಯ ಚಿತ್ರದ ಮೇಲೆ ಒಂದು ಸುಂದರವಾದ ಕವಿತೆಯನ್ನು ಬರೆದಿರುತ್ತಾರೆ.

ಇನ್ನೊಬ್ಬ ಮಹಾತ್ಮರು ಹೇಳಿರುತ್ತಾರೆ. "ಆಹಾ, ಮಾತಾ ಎಂಬ ಅಂದವಾದ ಸಿಹಿಯಾದ ಜೇನಿನಲ್ಲಿ ಅದ್ದಿರುವ ಶಬ್ದದಲ್ಲಿ ಎಷ್ಟು ಭಾವ, ಸ್ನೇಹದ ಸಮುದ್ರವು ತುಂಬಿರುವುದೋ ತಿಳಿಯದು. ಅದರ ವರ್ಣನೆಯೂ ಆಗಲಾರದು."

ಒಂದಾವರ್ತಿ ಎಲ್ಲಿಯೋ ಒಂದುಕಡೆ ಬಹಳ ದೊಡ್ಡ ಬೆಂಕಿಯು ಅನಾಹುತವಾಯಿತು. ಎಲ್ಲರೂ ತಮ್ಮ ತಮ್ಮ ಐಶ್ವರ್ಯವನ್ನು ಕಾಪಾಡಲಾರಂಭಿಸಿದರು. ಆದರೆ "ಎನಾಪಿಯಸ್" ಮತ್ತು "ಎಮ್. ಪಿನೋನಸ್" ಎಂಬ ಹೆಸರಿನ ಇಬ್ಬರು ಯುವಕರು ತಮ್ಮ ಬಹು ಮೂಲ್ಯವಾದ ಎಲ್ಲಾ ಧನಸಂಪತ್ತಿಯ ಕಡೆಗೆ ಗಮನಕೊಡದೆ ತಮ್ಮ ವೃದ್ಧ ಮಾತಾಪಿತರುಗಳನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಓಡಿಹೋದರು.

ಉತ್ತಮಳಾದ ಪುಣ್ಯವತಿ ಮಾತೆಯಿಂದ ಯಾವ ರೀತಿ ಎಲ್ಲಾ ಮಂಗಲಗಳೂ, ಸಾಧನಗಳೂ ಆಗುವುವೋ, ಅದೇ ರೀತಿ ಧರ್ಮರಹಿತಳಾದ ದುಃಶೀಲವತಿ ಮಾತೆಯಿಂದ ಕೆಟ್ಟದ್ದೂ ಆಗುವದು.

"ನೆಪೋಲಿಯನ್"ನ ಹೇಳಿಕೆಯು ಏನಂದರೆ—"ದೇಶೋನ್ನತಿಯನ್ನು ಮಾಡಬೇಕಾದರೆ ಒಳ್ಳೇ ಮಾತೆಯರನ್ನು ಒದಗಿಸಿರಿ" ಬಹಳ ನಿಜವು. ಎಲ್ಲಿಯಾವ ಕೆಟ್ಟಕೆಲಸವಾದರೂ ಅದರ ಎಲ್ಲಾ ಕಾರಣವೂ ಅಲ್ಲಿ ಒಳ್ಳೇ ಮಾತೆಯರಿಲ್ಲದಿರುವ ಕಾರಣವೇ ತಿಳಿಯುಬರುವುದು. ಮಾತೆಯು ಜಗಳಗಂಟಿ, ಕ್ರೋಧಮುಖಿ ಮತ್ತು ಯಾವಾಗಲೂ ದುರ್ಭಾಷಿಣಿಯೂ ಆಗಿದ್ದರೆ ಅವಳ ಸಂತಾನವೂ ಹಾಗೇ ಆದೀತು.

"ಕಾವೇಟ್" ಸಾಹೇಬರ ಹೇಳಿಕೆ ಏನಂದರೆ "ಮಾತೆಯು ಸ್ವಯಂ ಬಹಳ ಹೊತ್ತಿನ ಮೇಲೆ ಏಳುವವಳಾದರೆ ಸಾವಿರ ಉಪದೇಶಮಾಡಿದಾಗ್ಯೂ ಅವಳ ಕನ್ಯೆಯು ಎಂದೂ ಬೇಗನೇ ಹಾಸಿಗೆ ಬಿಡಲಾರಳು."

"ಲಾರ್ಡಬಾಯರ"ನು ತನ್ನ ಚರಿತ್ರೆಯ ದೋಷದ ಕಾರಣವನ್ನು ತನ್ನ ದುಃಶೀಲೆಯಾದ ಮಾತೆಯದ್ದೆಂದು ಹೇಳಿರುತ್ತಾನೆ. ದುರ್ಬಲನಾದ ಮನುಷ್ಯನು ಸುಶಿಕ್ಷಣವನ್ನು ಪಡೆದೂ ಯಾವಾಗ ಆಪತ್ತಿನಲ್ಲಿ

ಸಿಕ್ಕಿಬೀಳುತ್ತಾನೋ, ಆಗ ಅಶಿಕ್ಷಿತರಿಗೋಸ್ಕರ ಏನೂ ಹೇಳಬೇಕಾದದ್ದೇ ಇರುವುದಿಲ್ಲ. ಈ ದೇಶದಲ್ಲಿ ಸ್ತ್ರೀಶಿಕ್ಷಣವು ಇಲ್ಲವೇ ಇಲ್ಲವೋ, ಅಥವಾ ಈಗ ನಾಮಮಾತ್ರಕ್ಕೆ ಇದೆಯೋ? ಮೂರ್ಖಪುರುಷರಿಂದ ಸಮಾಜಕ್ಕೆ ಕೆಟ್ಟದ್ದಾಗುವ ಭಯವೆಷ್ಟಿರುವುದೋ, ಮೂರ್ಖಳಾದ ನಾರಿಯಿಂದ ಅದಕ್ಕಿಂತ ಕಡಿಮೆ ಭಯವಿರುವುದಿಲ್ಲ. ವಿಲಾಯತಿಯ ಯಾವುದೋ ಕಾರ್ಖಾನೆಯ ಮೇನೇಜರ್ ಸಾಹೇಬರು ಯಾವ ಬಾಲಕನನ್ನಾದರೂ ತಮ್ಮಲ್ಲಿ ಕೆಲಸಕ್ಕಿಟ್ಟುಕೊಳ್ಳಬೇಕಾದರೆ ಮೊದಲು ಅವನ ಮಾತೆಯ ಸ್ವಭಾವವನ್ನು ಚೆನ್ನಾಗಿ ಪರೀಕ್ಷಿಸಿ ತಿಳಿದುಕೊಳ್ಳುತ್ತಿದ್ದರು. ಇದರಿಂದ ತಿಳಿಮುಬರುವದೇನಂದರೆ—ಮಾತೆಯ ಸ್ವಭಾವವು ಚೆನ್ನಾಗಿದ್ದರೆ ಅವಳ ಸಂತತಿಯ ಸ್ವಭಾವವೂ ಚೆನ್ನಾಗಿರುವುದು.

ಅತಃ ಹೇ ಮಾತೆಗಳಿರಾ! ಸಾವಧಾನರಾಗಿರಿ. ಸಂಸಾರದಲ್ಲಿ ಸ್ವಲ್ಪ ಸಾವಧಾನದಿಂದ ಕಾಲಿಡಿರಿ. ನಿಮ್ಮಗಳ ಮೇಲೆ ಬಹಳ ದೊಡ್ಡ ಜವಾಬ್ದಾರಿಯ ಹೊರೆಯು ಹೊರಿಸಲ್ಪಟ್ಟಿದೆ. ಹೇ ಭಾರತಸಂತಾನಗಳಿರಾ! ನಿಮ್ಮಗಳ ನಿಜವಾದ ಉನ್ನತಿಯು ಯಾವಾಗ ಆಗುವುದೆಂದರೆ—ಯಾವಾಗ ನೀವು ಸುಶಿಕ್ಷಿತ, ಸದ್ಗುಣಗಳಿಂದ ಭೂಷಿತ ಮಾತೆಯರ ಕೈಯಿಂದ ಪಾಲಿಸಲ್ಪಟ್ಟು ಮತ್ತು ಅವರಿಂದ ಶಿಕ್ಷಣವನ್ನು ಪಡೆದು ನೀವು ಹೃದಯದಿಂದ ಅವರನ್ನು ಆದರಿಸುವಾಗಲೇ ನಿಮ್ಮ ಉನ್ನತಿಯಾಗುವುದು.

## ನಾರೀಚರ್ಯೆ.

ನಾರೀಸಮುದಾಯವು ಗೃಹಸ್ಥತನದ ಗೋಡೆಗೆ ಸಮಾನವಾಗಿದೆ. ನಾರಿಯು ಸುಶಿಕ್ಷಣವನ್ನು ಹೊಂದಿದವಳಾಗಿದ್ದರೆ, ಅವಳ ಪುತ್ರ ಪುತ್ರಿಯರೂ ಸುಶಿಕ್ಷಿತರಾಗುತ್ತಾರೆ. ಸುಶಿಕ್ಷಿತಳಾದ ನಾರಿಗೋಸ್ಕರ ಗೃಹಸ್ಥತನವೇ ಸ್ವರ್ಗವು. ಆದರೆ ಅಶಿಕ್ಷಿತೆಯ ಬಳಿಯಲ್ಲಿ ಅದೇ ಗೃಹಸ್ಥತನವು ನರಕಕ್ಕೆ ಸಮಾನವಾಗಿ ತಿಳಿಯಲ್ಪಡುವುದು. ರೋಗ, ಶೋಕ, ದುಃಖ, ದಾರಿದ್ರ್ಯ ಇತ್ಯಾದಿ ತಾಪಗಳಿಂದ ಜ್ವಲಿಸುತ್ತಿರುವ ಗೃಹಸ್ಥನಿಗೆ ನಿಕಪಾತ್ರ

ನಾರಿಯೇ ತಾಪದ ತೃಷೆಯನ್ನು ಪರಿಹರಿಸುವವಳೂ, ಮತ್ತು ಪೀಡೆಗೆ ಔಷಧವೂ ಆಗುತ್ತಾಳೆ.

ತಥಾ ರೋಗಾಭಿಭೂತಸ್ಯ ನಿತ್ಯಂ ಕೃಛ್ರಂ ಗತಸ್ಯ ಚ |
ನಾಸ್ತಿ ಭಾರ್ಯಾಸಮಂ ಕಿಂಚಿತ್ ನರಸ್ಯಾರ್ತಸ್ಯ ಭೇಷಜಂ ||

(ಮಹಾಭಾರತ, ಶಾಂತಿಪರ್ವ, ಆಪದ್ಧರ್ಮ, ೧೪೬ ಅ.)

ಯಾವ ಮನುಷ್ಯನು ಇಂಥಾ ಸ್ತ್ರೀಯನ್ನು ಪಡೆಯುತ್ತಾನೋ, ಅವನೇ ಸುಖಿಯು. ಅವನಿಗೆ ಸ್ವರ್ಗವು ಯಾವ ವಸ್ತುವೂ ಆಗಿರುವುದಿಲ್ಲ.

"ಸ್ವರ್ಗೇ ಕಿಂ ಯದಿ ವಲ್ಲಭಾ ನಿಜವಧೂಃ" ಏಕೆಂದರೆ—ಸ್ವರ್ಗ ಸುಖವು ಅಪೂರ್ವವಾಗಿರುತ್ತದೆ. ಸ್ವರ್ಗವಾಸಿಗಳೂ ಕೂಡ ತಮ್ಮ ಮನಃಕಾಮನೆಯನ್ನು ಎಲ್ಲಾ ಪ್ರಕಾರದಲ್ಲಿಯೂ ಪೂರ್ತಿಮಾಡಲೋಸುಗ ಈ ಸಂಸಾರದಲ್ಲಿ ಜನ್ಮವನ್ನೆತ್ತುತ್ತಾರೆ.

"ಸ್ವರ್ಗಿಣೋಽಪ್ಯೇತಮಿಚ್ಛಂತಿ" (ಶ್ರೀಮದ್ಭಾಗವತ ೧೧-೨೧-೧೧.) ಪಾಶುಪತಾಸ್ತ್ರವನ್ನು ಪಡೆಯುಲೋಸುಗ ಅರ್ಜುನನು ಕಠೋರವಾದ ತಪಸ್ಸನ್ನು ಮಾಡುವದನ್ನು ನೋಡಿ, ಆತನ ತಪಸ್ಸನ್ನು ಭಂಗಪಡಿಸಲೋಸುಗ ಇಂದ್ರನು ಅವನ ಬಳಿಗೆ ಊರ್ವಶಿಯನ್ನು ಕಳುಹಿಸಿದನು. ಆಗ ಊರ್ವಶಿಯು ಏನು ಹೇಳಿದ್ದಳೆಂದರೆ—"ಯಾವ ಪುರುಷನು ತನಗೆ ಅನುರೂಪಳಾದ ಸ್ತ್ರೀಯನ್ನು ಪಡೆಯುತ್ತಾನೋ, ಸಂಸಾರದಲ್ಲಿ ಅವನೇ ಮಹಾ ಸುಖಿಯೂ ಮಹಾ ಧನಿಯೂ ಆಗಿರುತ್ತಾನೆ."

ಮಹಾಮತಿವಂತನಾದ ಕಣ್ವಋಷಿಯು ಶಕುಂತಲೆಯನ್ನು ಪತಿಗೃಹಕ್ಕೆ ಕಳುಹಿಸುವಾಗ ಹೇಳಿರುತ್ತಾನೇನಂದರೆ—

ಶುಶ್ರೂಷಸ್ವ ಗುರೂನ್ ಕುರು ಪ್ರಿಯಸಖೀವೃತ್ತಿಂ ಸಪತ್ನೀಜನೇ
ಭರ್ತುರ್ವಿಪ್ರಕೃತಾಪಿ ರೋಷಣತಯಾ ಮಾಸ್ಮ ಪ್ರತೀಪಂ ಗಮಃ ||
ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ
ಯಾಂತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ ||

(ಶಕುಂತಲಾ ಅಂಕ ೪.)

ಅರ್ಥಾತ್ ಗುರುಜನರ (ದೊಡ್ಡವರ) ಸೇವೆಮಾಡುವುದೂ, ಸವತಿಯರಲ್ಲಿ ಪ್ರಿಯಸಖಿಯಂತೆ ಆಚರಿಸುವುದೂ, ಸ್ವಾಮಿಯು ಯಾವಾಗಲಾದರೂ ತಿರಸ್ಕಾರವನ್ನು ಮಾಡಿದರೂ ಸಹ ಕ್ರೋಧಮಾಡಿಕೊಂಡು ವಿರುದ್ಧವಾದ ಕೆಲಸಮಾಡದಿರುವುದೂ, ಪರಿವಾರದ ಜನರಲ್ಲೆಲ್ಲಾ ಬಹಳ ಉಪಾರತೆಯಿಂದ ವ್ಯವಹರಿಸುವುದೂ, ಭೋಗ್ಯವಸ್ತುಗಳಲ್ಲಿ ಅಭಿಲಾಷೆ ಇಡದಿರುವುದೂ, ಸ್ತ್ರೀಯರು ಈ ರೀತಿ ಯಾವಾಗ್ಗೆ ಕೆಲಸ ನಡಿಸುವರೋ, ಅವರು ಆಗ ಕುಲಭೂಷಣರಾಗುತ್ತಾರೆ. ಮತ್ತು ಇದಕ್ಕೆ ವಿಪರೀತವಾಗಿ ಆಚರಿಸುವವರು ಕುಲಕ್ಕೆ ಪೀಡಾಸ್ವರೂಪರಾಗುತ್ತಾರೆ.

ಮಹಾದೇವನೂ ಕೂಡ ಕನ್ಯೆಯರಿಗೆ ಶಿಕ್ಷಣವನ್ನು ಕೊಡುವುದು ಉಚಿತವೆಂಬದಾಗಿ ತನ್ನ ಸತಿಯಲ್ಲಿ ಹೇಳಿರುತ್ತಾನೆ.

"ಕನ್ಯಾಪ್ಯೇವಂ ಪಾಲನೀಯಾ ಶಿಕ್ಷಣೀಯಾತಿಯತ್ನತಃ"

(ಮಹಾನಿರ್ವಾಣತಂತ್ರ, ೮ ಉಲ್ಲಾಸ.)

ಆದರೆ ಈ ಕಾಲದ ಮಾತಾಪಿತೃಗಳು ಕನ್ಯೆಯರನ್ನು ಪಾಠಶಾಲೆಗೆ ಕಳುಹಿಸುವುದರಿಂದಲೇ ಅವರ ಮೇಲಿನ ಜವಾಬ್ದಾರಿಕೆಯು ಮುಗಿಯುತ್ತದೆಂದು ತಿಳಿಯುತ್ತಾರೆ. ಕನ್ಯೆಯರ ಮನಸ್ಸು ಮತ್ತು ಚರಿತ್ರೆಯು ಸುವ್ಯವಸ್ಥೆಯಿಂದಿರಲು ಮಾತೆಯ ಉಪದೇಶವು ಬಹಳ ಫಲಕಾರಿಯಾಗುತ್ತದೆ. ಪಾಠಶಾಲೆಗೆ ಕಳುಹಿಸಿ ನಿಶ್ಚಿಂತರಾಗಿಬಿಟ್ಟರೆ ಪಾಠಶಾಲೆಯ ಶಿಕ್ಷಣದಿಂದ ಅದು ಪೂರ್ಣವಾಗಲಾರದು.

ಹಸಿಯಾದ ಬಿದಿರು ಬೇಗನೇ ಬಗ್ಗುವುದು. ಎಳೆದಾಗಿದ್ದಾಗಲೇ ಬಾಲಿಕೆಯರಿಗೆ ಅವರ ಕರ್ತವ್ಯವಿಷಯವಾದ ಸುಶಿಕ್ಷಣವು ಕೊಡಲ್ಪಟ್ಟರೆ, ಅವರ ಅಂತಃಕರಣವು ಎಂಥಾ ಮನೋಹರರೂಪವಾಗಿರುವುದೆಂದರೆ ಅದರ ವರ್ಣನೆಯು ಅಸಾಧ್ಯವು. ಸ್ವಾಮಿಯ ಯಾವತರದ ಅತ್ಯಾಚರಣೆಯಿಂದಲೂ, ದೊಡ್ಡವರ (ವೃದ್ಧರ) ತಿರಸ್ಕಾರದಿಂದಲೂ, ಎರಡನೇ ಆತ್ಮೀಯರಾದವರ ದುರಾಚಾರದಿಂದಲೂ, ಯಾವ ವಿಧದಲ್ಲಿಯೂ ಅವರ ಮನಸ್ಸಿನಲ್ಲಿ ವಿಕಾರ ಉಂಟಾಗದು. ಆ ಮನಸ್ಸು ಯಾವದೋ ಒಂದು

ಪ್ರತ್ಯೇಕ ಸ್ಥಾನದ ಸಂಪತ್ತಾಗಿಹೋಗುತ್ತದೆ. ದೇವತೆಗಳು ಕೂಡ ಅಂತಹ ಮನಸ್ಸನ್ನು ಪ್ರಶಂಸೆಮಾಡಲು ತೊಡಗುತ್ತಾರೆ. ಧರ್ಮರಾಜನು ಸಾವಿತ್ರಿಯ ಮಾತುಗಳನ್ನು ಕೇಳಿ ತನ್ನನ್ನು ತಾನೇ ಮರೆತಿದ್ದನು.

ನಿಜವಾದ ಶಿಕ್ಷಣದ ಅಭಾವದಿಂದ ಸ್ತ್ರೀಯರು ಸಾಧಾರಣವಾಗಿ ಸ್ವಾಮಿಯನ್ನು ತಮ್ಮ ಸುಖದ ಯಂತ್ರವನ್ನಾಗಿ ತಿಳಿಯುತ್ತಾರೆ. ಸ್ತ್ರೀ ಮತ್ತು ಪುರುಷರ ಕೂಡುವಿಕೆಯಲ್ಲಿ ಯಾವ ದೇವಭಾವವು ಇರುತ್ತದೋ, ಪತಿಯಲ್ಲಿ ಯಾವ ದೇವತ್ವವಿರುತ್ತದೋ, ಸ್ತ್ರೀಯು ಅದನ್ನು ಯಾವಾಗಲೂ ಯೋಚಿಸಿ ಕೂಡ ನೋಡುವುದಿಲ್ಲ. ಸ್ತ್ರೀಯು ಒಂದು ವೇಳೆ ಸ್ವಾಮಿಯ ಅನುರಾಗವನ್ನು ದೇವಭಾವವನ್ನಾಗಿ ತಿಳಿಯಲು ಸಮರ್ಥಳಾಗಿದ್ದರೆ ಎಷ್ಟು ಸುಖಪ್ರದವಾಗುತ್ತಿತ್ತೋ, ಲೇಖಣಿಯು ಅದನ್ನು ಬರೆಯುವಷ್ಟು ಶಕ್ತಿಯುಳ್ಳದ್ದಾಗಿರುವುದಿಲ್ಲ. ಒಂದು ವೇಳೆ ಪತಿಯಲ್ಲಿ ಅನುರಾಗವು ಸ್ವಾರ್ಥಸಿದ್ಧಿಯ ದೆಸೆಯಿಂದ ತುಂಬಿದ್ದರೆ ಎರಡನೆಯ ನರಕದ ಕಲ್ಪನೆಯನ್ನು ಕೂಡ ಮಾಡುವ ಆವಶ್ಯಕವಿಲ್ಲ. ಇದೇ ಸಂಸಾರವು ಇಂಥಾ ಸ್ವಾರ್ಥೀ ಸ್ತ್ರೀಯ ಗೃಹಸ್ಥತನವು ನಿಜವಾಗಿಯೂ ನರಕಕ್ಕೆ ಸಮಾನವಾಗಿರುವುದು. ಏಕೆಂದರೆ ಎಲ್ಲಿ ಸ್ವಾರ್ಥವಿರುವುದೋ, ಅಲ್ಲಿ ಅಶಾಂತಿಯೂ ಇರುವುದು. ಮತ್ತು ಆ ಅಶಾಂತಿಯನ್ನು "ಸಹಾರದ ಮರುಭೂಮಿ"ಯ (Sahar desert) ಜೊತೆಯಲ್ಲಿ ತುಲನೆಮಾಡಿದರೆ ಏನೂ ಅತ್ಯುಕ್ತಿಯಾಗಲಾರದು.

ಸ್ತ್ರೀಯು ಸ್ವಾಮಿಯನ್ನು ಆದರಿಸಲಿ, ಅವನಲ್ಲಿ ಪ್ರೇಮವನ್ನು ಮಾಡಲಿ, ಆದರೆ ಆದರವೂ ಪ್ರೇಮವೂ ಸ್ವಾರ್ಥದ ದೋಷದಿಂದ ದೂಷಿತವಾಗದಿರಲಿ. ಯಾವ ಆದರದಲ್ಲಿ ಸ್ವಾರ್ಥವಿರುವುದೋ ಅದು ಆದರವಲ್ಲ. ಮತ್ತು ಅದು ಪ್ರೇಮವೂ ಅಲ್ಲ. ಅದು ವೈಶ್ಯರ ವ್ಯವಹಾರದಂತೆ ಲೇವಾದೇವಿಯ ವ್ಯಾಪಾರವಾಗಿರುತ್ತದೆ. ಸ್ವಾರ್ಥದ ಪ್ರೇಮವು ಎಲ್ಲರಲ್ಲಿಯೂ ಇರುತ್ತದೆ. ದಾರಿಯಲ್ಲಿ ನಡೆಯುವ ಪಥಿಕನು ಸ್ವಾರ್ಥವ್ಯವಹಾರವನ್ನು ನಡಿಸುತ್ತಾನೆ. ಅದರಲ್ಲಿ ಪ್ರಶಂಸೆಗೆ ಯೋಗ್ಯವಾದ ಮಾತೇನಿದೆ? ಸ್ವಾಮಿಯನ್ನು ಆದರಿಸುವುದು ಸ್ತ್ರೀಯರ ಪರಮಧರ್ಮವು.

ಇಷ್ಟನ್ನೆ ತಿಳಿದುಕೊಂಡು ಸ್ತ್ರೀಯಳು ತನ್ನ ಸ್ವಾಮಿಯನ್ನು ಆದರಿಸ ಬೇಕು. ಹೀಗೆ ಮಾಡದಿರುವುದರಿಂದ ಪಾಪವಿದೆ. ಯಾಕಂದರೆ—ಅದ ರಿಂದ ನರಕಯಾತನೆಯನ್ನು ಅನುಭವಿಸಬೇಕಾಗುತ್ತದೆ. ಗೃಹಸ್ಥತನವೇ ನರಕರೂಪವಾಗಿ ಹೋಗುತ್ತದೆ. ಗೋಸ್ವಾಮಿ ತುಲಸೀದಾಸನು ದೇವೀ ಅನುಸೂಯೆಯ ಮುಖದಿಂದ ಸೀತಾದೇವಿಗೆ ಸ್ತ್ರೀಯರ ಧರ್ಮವನ್ನು ಹೇಗೆ ಹೇಳಿರುತ್ತಾನೆಂದರೆ—

ವೃದ್ಧ, ರೋಗವಶ, ಜಡ, ಧನಹೀನಾ ।
ಅಂಧ, ಬಧಿರ, ಕ್ರೋಧೀ, ಅತಿದೀನಾ ॥
ಐಸೇಹು ಪತಿಕರ ಕಿಯಾ ಅಪಮಾನಾ ।
ನಾರಿಪಾಪ ಯಮಪುರ ದುಃಖನಾನಾ ॥

ಪತಿಯ ಪ್ರತಿಯೊಂದು ಕರ್ತವ್ಯಗಳನ್ನು ಪಾಲಿಸದಿದ್ದರೆ ಮಧ್ಯಮ ಮತ್ತು ಅಧಮ ನಾರಿಯರಿಗೆ ಯಮಯಾತನೆಯ ಭಯವನ್ನು ಮಾಸಿಸ ಬೇಕಾಗುತ್ತದೆ. ಆದರೆ ಉತ್ತಮಳಾದ ಸ್ತ್ರೀಗೆ ಇಂಥಾ ಭಯದಿಂದ ಕೆಲಸವಿಲ್ಲ. ಯಾಕಂದರೆ—ಪತಿಯನ್ನು ಆದರಿಸದ ವಿನಹ, ಆತನ ಸೇವೆ ಮಾಡದ ವಿನಹ ಅವಳ ಮನಸ್ಸಿಗೆ ಶಾಂತಿಯುಂಟಾಗುವುದಿಲ್ಲ. ಅವಳು ಪತಿಗೆ ಭೋಜನಮಾಡಿಸಿ, ವಸ್ತ್ರ ಉಡಿಸಿ ಯಾವ ಸುಖವನ್ನು ಪಡೆಯು ತ್ತಾಳೋ, ಆ ಸುಖವು ಅವಳಿಗೆ ತನ್ನ ಭೋಜನ ಯಾ ವಸ್ತ್ರಧಾರಣೆ ಯಿಂದ ಉಂಟಾಗುವುದಿಲ್ಲ. ಅವಳ ಪತಿಪ್ರೇಮವಾದರೂ ಅಸೀಮವಾ ಗಿರುತ್ತದೆ. ಯಾಕಂದರೆ—ತಾನು ಯಾವ ವಿಷಯದಲ್ಲಾದರೂ ದುಃಖಿತ ಳಾಗಿದ್ದರೂ ಕೂಡ ಪತಿಗೆ ಹೇಳುವುದಿಲ್ಲ. ಯಾಕಂದರೆ—ತನ್ನ ದುಃಖದ ಸ್ಥಿತಿಯನ್ನು ಕೇಳಿ ಪತಿಯು ದುಃಖಿತನಾಗುವನೆಂಬ ಭಾವನೆಯಿಂದ ಹೇಳುವುದಿಲ್ಲ. ಅವಳ ಪ್ರೇಮವೇ ಅಮರಾವತಿಯ ಸಂಪತ್ತು. ಪತಿಯು ತನ್ನನ್ನು ಆದರಿಸುತ್ತಾನೋ ಇಲ್ಲವೋ ಎಂಬದರ ಕಡೆಗೆ ಅವಳು ಲಕ್ಷ್ಯವೇ ಕೊಡುವುದಿಲ್ಲ. ತನ್ನ ಕೆಲಸದಲ್ಲಿಯೇ ಮತ್ತಳಾಗಿ ಪತಿಪ್ರೇಮದಲ್ಲಿ ನಿರತಳಾಗಿರುತ್ತಾಳೆ. ಅವಳಿಗೆ ಪತಿಯು ಯಾವ ಕಾರಣದಿಂದಲಾದರೂ ತನ್ನನ್ನು ಆದರಿಸದಿದ್ದರೂ ಅವಳ ಸುಖದಲ್ಲಿ ಯಾವ ಅಂತರವೂ ಬೀಳು

ವುದಿಲ್ಲ. ಅವಳು ತನ್ನ ಮಾತನ್ನೆ ಎಣಿಸುವುದಿಲ್ಲ. ಪತಿಯು ಸುಖಿಯಾಗಿರುವುದನ್ನು ನೋಡಿಯೇ ಆನಂದಮಗ್ನಳಾಗಿರುತ್ತಾಳೆ. ಪತಿಯ ಸುಖದಿಂದಲೇ ಅವಳು ಸುಖಿಯಾಗುತ್ತಾಳೆ. ಸೀತಾದೇವಿಯು ಅಗ್ನಿಸ್ನಾನದಿಂದ ಪರಿಶುದ್ಧಳಾಗಿದ್ದಳು. ಆದರೂ ಕೂಡ ರಾಮಚಂದ್ರನು ಅವಳಿಗೆ ವನವಾಸವನ್ನು ವಿಧಿಸಿದನು. ಆಗ ಸೀತಾದೇವಿಯು ಲಕ್ಷ್ಮಣನು ಹಿಂದೆ ತಿರುವಾಗ ಏನು ಹೇಳಿದಳೆಂದರೆ—"ಲಕ್ಷ್ಮಣ! ನೀನು ಹೋಗಿ ಶ್ರೀರಾಮಚಂದ್ರನಲ್ಲಿ ಜನ್ಮಾಂತರದಲ್ಲಿಯೂ ಅವನೇ ನನಗೆ ಪತಿಯಾಗಲಿ ಎಂದು ನಾನು ಪ್ರಾರ್ಥಿಸುತ್ತೇನೆ. ಆದರೆ ಇನ್ನು ಯಾವಾಗಲೂ ನನಗೆ ಅವನ ಅಗಲುವಿಕೆಯ ದುಃಖವು ಅನುಭವಿಸಬೇಕಾಗದಿರಲಿ ಎಂದು ಹೇಳು" ಎಂಬದಾಗಿ ಹೇಳಿ ಕಳುಹಿಸಿದಳು.

"ಭೂಯೋ ಯಥಾ ಮೇ ಜನನಾಂತರೇಽಪಿ
ತ್ವಮೇವ ಭರ್ತಾ ನಚ ವಿಪ್ರಯೋಗಃ ।"

(ರಘುವಂಶ ೧೪ ಸ.)

ಸ್ತ್ರೀಯರನ್ನು ಮಾನಿಸುವುದು ಅನುಚಿತವು. ಯಾಕೆಂದರೆ—ಮಾನದಿಂದ ಪ್ರೇಮಕ್ಕೆ ಹಾನಿತಟ್ಟುತ್ತದೆ. ಸ್ವಾಮಿಗೆ ಯಾವ ವಿಷಯದಲ್ಲಿಯೂ ತೊಂದರೆಪಡಿಸಬಾರದು. ಸ್ತ್ರೀಯು ತನ್ನ ಅಹಂಭಾವ, ಮತ್ತು ತನ್ನದೆಂಬ ದುರಭಿಮಾನವನ್ನು ಪತಿಯ ಚರಣಕಮಲಗಳಲ್ಲಿ ಲೀನಮಾಡಿ ಸುಖಿಯಾಗಬೇಕು. ನನಗೆ ಈ ವಸ್ತು ಬೇಕು, ಆ ವಸ್ತು ಬೇಕು, ಎಂದು ಹೇಳಿ ಪತಿಗೆ ಅವಳು ತೊಂದರೆಪಡಿಸಬಾರದು. ತನ್ನ ಅವಸ್ಥೆಗನುಸಾರವಾಗಿ ಪತಿಯು ಪತ್ನಿಗೆ ಪ್ರೇಮದಿಂದ ಯಾವದನ್ನು ಕೊಡುತ್ತಾನೋ, ಅದರಲ್ಲೇ ಸಂತುಷ್ಟಳಾಗಬೇಕು. ಪತಿಯು ಅವಳ ಸುಖಕ್ಕೋಸ್ಕರವಲ್ಲ. ತಾನೇ ಪತಿಗೆ ಸುಖಕೊಡಬೇಕೆಂದು ತನ್ನ ಮನಸ್ಸಿನ ಭಾವನೆಯನ್ನು ಇಟ್ಟುಕೊಳ್ಳಬೇಕು. ಈ ಭಾವನೆಯಿಂದಲೇ ಅವಳು ನಿಜವಾದ ಸುಖವನ್ನು ಪಡೆಯುವಳು. ಪತಿಯು ಒಂದು ವೇಳೆ ಏನಾದರೂ ಅನೀತಿಯನ್ನು ಮಾಡಿದರೂ ಕೂಡ ಅವಳು ತನ್ನ ಮನಸ್ಸಿನಿಂದ ಈ ಭಾವನೆಯನ್ನು ದೂರವಾಗಲು ಬಿಡಬಾರದು. ಪತಿಯು ಮನಸ್ಸಂತೋಷ

ಪಡಿಸುವುದೇ ಅವಳ ಜೀವನದ ಮಹಾವ್ರತವು. ಪತಿಯಲ್ಲಿ ಯಾವಾ ಗಲೂ ಪ್ರಿಯವಚನವನ್ನಾಡುವುದೇ ಅವಳು ತನ್ನ ಜೀವನದ ಧರ್ಮವಾಗಿ ತಿಳಿದುಕೊಳ್ಳಬೇಕು. ಯಾವಾಗಲೂ, ಯಾವ ಕಾರಣದಿಂದಲೂ ಪತಿ ಯಲ್ಲಿ ಅವಳು ಕಟುವಾಕ್ಯವನ್ನಾಡಬಾರದು. ಅಥವಾ ಕ್ರೋಧದೃಷ್ಟಿ ಯಿಂದ ನೋಡಬಾರದು. ಯಾವ ಸ್ತ್ರೀಯು ತನ್ನ ಜನ್ಮದಲ್ಲಿಯೇ ಪತಿಗೆ ಪ್ರತಿಯಾಗಿ ಅಪ್ರಿಯ ಆಚರಣೆಯನ್ನು ಮಾಡುವದಿಲ್ಲವೋ, ಆವಳು ಪತಿಯೊಡನೆ ಅಸೀಮಾನಂದವನ್ನು ಭೋಗಿಸುತ್ತಾಳೆ.

ಪತ್ನಿಯು ಪತಿಯ ಶಯ್ಯೆಯ ಬಳಿಗೆ ಹೋಗಿ ಪತಿಗೆ ಪ್ರಣಾಮ ಮಾಡಿ ಅವನ ಬಳಿಯಲ್ಲಿ ಮಲಗಿರಬೇಕು. ಪತಿಯು ನಿದ್ರಿತನಾದ ಮೇಲೆ ತಾನು ನಿದ್ರಿಸಬೇಕು. ಮತ್ತು ಅವನು ಎಚ್ಚರವಾಗುವ ಮೊದಲು ತಾನು ಎಚ್ಚತ್ತಿರಬೇಕು. ಪತಿಯೇ ಸ್ತ್ರೀಯ ಗುರುವು. ಈ ಪತಿಸೇ ವೆಯ ಬಲದಿಂದಲೇ ಪತ್ನಿಯು ಭೂತ, ಭವಿಷ್ಯ ಮತ್ತು ವರ್ತಮಾನ ಎಂಬ ಮೂರು ಕಾಲದ ಮಾತನ್ನು ತಿಳಿದುಕೊಳ್ಳಲು ಶಕ್ತಳಾಗುತ್ತಾಳೆ. ವಿಷ್ಣುಪುರಾಣದಲ್ಲಿ ಇದರ ವರ್ಣನೆಯು ತೋರಿಬರುತ್ತದೆ. ಹೇಗಂ ದರೆ—ಒಂದು ದಿನ ವೇದವ್ಯಾಸರು ಗಂಗಾನದಿಯಲ್ಲಿ ಸ್ನಾನಮಾಡಿ ಕೊಂಡು ಬರುತ್ತಾ ಧನ್ಯ ಕಲಿಯುಗ ಮತ್ತು ಧನ್ಯ ಸ್ತ್ರೀ ಎಂದು ಹೇಳಿ ದರು. ಆಗ ತೀರದಲ್ಲಿ ಕುಳಿತಿದ್ದ ಋಷಿಗಳು "ಕಲಿಯುಗ ಮತ್ತು ಸ್ತ್ರೀ ಎಂಬದರ ಮಹತ್ವವೇನು" ಎಂಬದಾಗಿ ಕೇಳಿದರು. ಅದಕ್ಕೆ ವ್ಯಾಸರು ಹೇಳುತ್ತಾರೇನಂದರೆ—"ಸತ್ಯ, ತ್ರೇತಾ, ದ್ವಾಪರ ಈ ಯುಗತ್ರಯಗ ಳಲ್ಲಿ ಯಜ್ಞ ಯಾಗಾದಿಗಳನ್ನು ಮಾಡದ ವಿನಹ ಮನುಷ್ಯನು ಮುಕ್ತಿ ಯನ್ನು ಪಡೆಯಲು ಶಕ್ತನಾಗುತ್ತಿದ್ದಿಲ್ಲ. ಆದರೆ ಕಲಿಯುಗದಲ್ಲಿ ಪುರುಷರು ಏಕಮಾತ್ರ ನಾರಾಯಣನಾಮವನ್ನು ಹೇಳಿಯೂ ಮತ್ತು ಸ್ತ್ರೀಯರು ಪತಿಸೇವೆಯೆಂಬ ಏಕಮಾತ್ರ ವ್ರತಬಲದಿಂದಲೂ ಅನಂತವಾದ ಸ್ವರ್ಗ ಭೋಗಗಳ ಅಧಿಕಾರಿಗಳಾಗುತ್ತಾರೆ."

ಸ್ಕಾಂದಪುರಾಣದ ಭವಿಷ್ಯೋತ್ತರಖಂಡದಲ್ಲಿ ಯಾವಾಗ ಶೀಲೆಯು ತನ್ನ ಪತಿಗೃಹಕ್ಕೆ ತೆರಳುವವಳಾದಳೋ, ಆಗ ಪಿತನನ್ನು ಕುರಿತು ಕೇಳು

ತ್ತಾಳೆ. "ಹೇ ಪಿತನೆ! ಸ್ವಾಮಿಯಲ್ಲಿ ಯಾವ ರೀತಿ ನಡೆದುಕೊಳ್ಳ ಬೇಕು ಎಂಬದರ ಶಿಕ್ಷಣವನ್ನು ನನಗೆ ಕೊಡಿರಿ."

ಆಗ ಸುಮಂತನು ಶೀಲೆಯು ತನ್ನ ಜಾಮಾತನಾದ ಕೌಂಡಿನ್ಯ ನೊಂದಿಗೆ ಹೋಗುವುದನ್ನು ನೋಡಿ ಹೇಳುತ್ತಾನೆ. "ಹೇ ಮಗಳೇ! ಪತಿಯು ಯಾವಾಗ ಕ್ಷುಧಾಪೀಡಿತನಾಗುತ್ತಾನೋ, ಆ ಸಮಯದಲ್ಲಿ ಅವನಿಗೆ ಸುಂದರ ಮತ್ತು ಸುಸ್ವಾದುವಾದ ಭೋಜನವನ್ನು ಮತ್ತು ಸುಶೀತಲವಾದ ನೀರನ್ನು ಸಹ ತಂದುಕೊಡುವವಳಾಗು. ಇದೇ ನಿನ್ನ ವ್ರತವು" ಎಂದು ಹೇಳಿದನು.

ಪತಿಯು ಯಾವ ಕೆಲಸವನ್ನು ಆಕ್ಷೇಪಿಸುತ್ತಾನೋ, ಪತ್ನಿಯು ಅದನ್ನು ಯಾವಾಗಲೂ ಮಾಡಬಾರದು. ಪತ್ನಿಯು ತನ್ನ ಹಿತವನ್ನು ಬಯಸುವವಳಾದರೆ ಪ್ರಾಣ ಹೋದರೂ ಕೂಡ ಪತಿಯ ಸಮ್ಮತಿಯ ವಿನಹ ಯಾವ ಕಾರ್ಯವನ್ನೂ ಮಾಡಬಾರದು.

ಪತಿಯು ಯಾವ ಮಾತಿನ ಶಿಕ್ಷಣವನ್ನು ಕೊಡುತ್ತಾನೋ, ಅದನ್ನೆ ಮಾನಿಸಬೇಕು. ಅವನು ಯಾವದನ್ನು ಮಾಡಬಾರದಾಗಿ ಹೇಳು ತ್ತಾನೋ, ಅದನ್ನು ಯಾವಾಗಲೂ ಮಾಡಬಾರದು. ಪತ್ನಿಯು ಪತಿಗೆ ಅಸಂಗತವಾದ ಯಾ ಕಟುವಾದ ವಾಕ್ಯವನ್ನು ಎಂದಿಗೂ ಹೇಳ ಬಾರದು.

ನಾರಿಯು ಯಾವಾಗಲೂ ಅಸತಿಯಾದ ಸ್ತ್ರೀಯಲ್ಲಿ ಮಾತುಕಥೆ ಯನ್ನು ಮಾಡಬಾರದು. ಆಕಾಂಕ್ಷೆ ಮಾಡುವ ಎರಡನೇ ಪುರುಷರಿಗೆ ಮನಸ್ಸಿನಲ್ಲಿ ಯಾವಾಗ್ಯೂ ಸ್ಥಾನ ಕೊಡಬಾರದು. ಮತ್ತು ಮರೆತು ಸಹ ಆ ಕಡೆ ನೋಡಬಾರದು.

ಯಾವ ನಾರಿಯು ಈ ಪ್ರಕಾರದಲ್ಲಿ ತನ್ನ ಹಿತವನ್ನು ಬಯಸಿರು ತ್ತಾಳೋ, ಅವಳಲ್ಲಿ ಔಷಧ ಮತ್ತು ಮಂತ್ರದ ವಿನಹ ಪತಿಯು ಸಂತು ಷ್ಟನಾಗಿರುತ್ತಾನೆ. ಮತ್ತು ಇನ್ನು ಬೇರೆ ಶಾಸ್ತ್ರಗ್ರಂಥಗಳಲ್ಲಿಯೂ ಕೂಡ "ಪತಿಯು ಸದಾಚಾರಿಯಲ್ಲದಿರಲಿ, ಮನಬಂದಂತೆ ಕಾರ್ಯಮಾಡುವವ

ನಿರಲಿ, ಅಥವಾ ಗುಣಹೀನನಾಗಿರಲಿ, ಆದಾಗ್ಯೂ ಪತ್ನಿಯು ಅವನನ್ನು ದೇವತೆಯೆಂದು ತಿಳಿದು ಸೇವೆಮಾಡಬೇಕು'' ಎಂಬದಾಗಿ ಬರೆದಿದೆ.

ಯಾವ ಸ್ತ್ರೀಯು ಮನ, ವಚನ ಮತ್ತು ಶರೀರವನ್ನು ವಶಮಾಡಿ ಕೊಂಡು ಪತಿಗೆ ವಿರುದ್ಧವಾಗಿ ವರ್ತಿಸುವುದಿಲ್ಲವೋ, ಅವಳು ಪತಿಲೋಕ ವನ್ನು ಪಡೆಯುತ್ತಾಳೆ. ಮತ್ತು ಸಾಧುಗಳು ಅವಳನ್ನು ಸಾಧ್ವೀ ಎಂದು ಹೇಳುತ್ತಾರೆ.

ಮತ್ತು ಯಾವ ನಾರಿಯು ವ್ಯಭಿಚಾರದೋಷದಿಂದ ದುಷ್ಟಳಾಗು ತ್ತಾಳೋ, ಅವಳನ್ನು ಎಲ್ಲರೂ ನಿಂದಿಸುತ್ತಾರೆ. ಅವಳು ಎರಡನೇ ಜನ್ಮದಲ್ಲಿ ಶೃಗಾಲಯೋನಿಯಲ್ಲಿ ಜನ್ಮವನ್ನೆತ್ತುವುದಲ್ಲದೆ, ಅಸಾಧ್ಯ ವಾದ ರೋಗದಿಂದ ಪೀಡಿತಳಾಗುತ್ತಾಳೆ.

ಗೃಹವನ್ನು ದೀಪಕ್ಕೆ ಸಮಾನವಾಗಿ ಪ್ರಜ್ವಲಿಸುವಂತೆ ಮಾಡುವ ಮಹಾ ಭಾಗ್ಯವತಿಯಾದ ರಮಣಿಯು ಸಂತಾನಕ್ಕೋಸ್ಕರವೂ ಜಿತಳಾ ಗುತ್ತಾಳೆ. ಸ್ತ್ರೀ ಮತ್ತು ಶ್ರೀ(ಲಕ್ಷ್ಮಿ)ಗೆ ಯಾವ ಭೇದವೂ ಇರುವುದಿಲ್ಲ.

ಸಂತಾನದ ಉತ್ಪತ್ತಿ, ಉತ್ಪನ್ನ ಸಂತಾನದ ಪಾಲನೆ ಮತ್ತು ನಿತ್ಯದ ಗೃಹಕಾರ್ಯಗಳು ಇವೆಲ್ಲಾ ಸ್ತ್ರೀಯ ಅಧೀನವಾದವುಗಳು.

ಸಂತಾನ, ಧರ್ಮಕಾರ್ಯ, ಸೇವಾ, ಉತ್ತಮವಾದ ಆನಂದ, ತನ್ನ ಮತ್ತು ಪುರುಷರ ಸ್ವರ್ಗಲಾಭ ಇವುಗಳೆಲ್ಲಾ ಪತ್ನಿಯ ಅಧೀನ ವಾದವುಗಳು.

ಸ್ತ್ರೀಯರಿಗೋಸ್ಕರ ಯಜ್ಞ, ವ್ರತ ಮತ್ತು ಉಪವಾಸವು ಪ್ರತ್ಯೇಕ ವಾಗಿರುವುದಿಲ್ಲ. ಪತಿಸೇವೆಯಿಂದಲೇ ಅವಳಿಗೆ ಸ್ವರ್ಗಸುಖವು ಸಿಗುತ್ತದೆ.

ಯಾವ ಪತಿಪರಾಯಣಳಾದ ನಾರಿಯು ಪತಿಯ ಆರ್ಥಿಕದೆಶೆ ಮತ್ತು ಮನದ ಕಡೆಗೆ ಧ್ಯಾನವನ್ನಿಟ್ಟು ಸದಾ ಪತಿಗೆ ಸುಖಕೊಡುವಂಥಾ ಕೆಲಸವನ್ನೆ ಮಾಡುತ್ತಾಳೋ, ಅವಳಿಗೇನೇ ಭಾರ್ಯಾ ಎಂದು ಹೇಳಲ್ಪ ಡುತ್ತದೆ. ಎರಡನೇ (ಹೀಗೆ ಅನುವರ್ತಿಸದಿರುವ) ಸ್ತ್ರೀಗೆ ಜರಾ (ವೃದ್ಧತ್ವ) ಎಂದು ಹೇಳಬೇಕು.

ಅರ್ಥಾತ್ ಜರಾಗ್ರಸ್ತನಾಗಿ ಪುರುಷನು ಹೇಗೆ ಸದಾಕಾಲದಲ್ಲಿಯೂ ಕ್ಲೇಶಪಡುತ್ತಾನೋ, ಹಾಗೆಯೇ ಯಾವ ನಾರಿಯು ಮೇಲೆ ಹೇಳಿದ ಧರ್ಮವನ್ನು ಪಾಲಿಸುವುದಿಲ್ಲವೋ, ಅವಳ ಸಂಗತಿಯಲ್ಲಿ ಪತಿಯು ಅನೇಕ ದುಃಖಗಳನ್ನು ಹೊಂದಬೇಕಾಗುತ್ತದೆ. ಯಾವ ನಾರಿಯು ಪತಿಹಿತಕಾರಿಣಿಯೋ, ಅಪ್ರಿಯವಚನಗಳನ್ನಾಡುವುದಿಲ್ಲವೋ, ಗೃಹಕೃತ್ಯಗಳಲ್ಲಿ ಚತುರಳೋ, ಅವಳೇ ಸಾಧ್ವಿಯೂ ಮತ್ತು ಪತಿವ್ರತೆಯೂ ಆಗಿರುತ್ತಾಳೆ. ಇಂಥಾ ಗುಣದಿಂದ ಯುಕ್ತಳಾದ ಸ್ತ್ರೀಯು ನಿಃಸಂದೇಹವಾಗಿಯೂ ಲಕ್ಷ್ಮೀಸ್ವರೂಪಳು. ಇದರಲ್ಲಿ ಏನೂ ಸಂದೇಹವಿಲ್ಲ.

ಪತಿಯು ಜೀವದಿಂದಿರುವಾಗಲೂ, ಅಥವಾ ಮರಣಾನಂತರವೂ, ಯಾವ ಸ್ತ್ರೀಯು ಎರಡನೇ ಪುರುಷನ ಬಳಿಗೆ ಹೋಗುವುದಿಲ್ಲವೋ, ಅವಳು ಈ ಲೋಕದಲ್ಲಿ ಕೀರ್ತಿಯನ್ನು ಪಡೆದು, ಪರಲೋಕದಲ್ಲಿ ಭಗವತಿಯ ಜೊತೆಯಲ್ಲಿ ಸುಖವನ್ನನುಭವಿಸುತ್ತಾಳೆ.

ಯಾವ ಸ್ತ್ರೀಯು ಪತಿಗೆ ಹಿತವಾದ ಮತ್ತು ಪ್ರಿಯವಾದ ಕಾರ್ಯವನ್ನು ಮಾಡುವುದರಲ್ಲಿಯೇ ತೊಡಗಿರುತ್ತಾಳೋ, ಶುದ್ಧಾಚಾರಿಣೀ ಮತ್ತು ಇಂದ್ರಿಯಗಳನ್ನು ಜಯಿಸುವವಳೂ ಆಗಿರುತ್ತಾಳೋ, ಅವಳು ಈ ಲೋಕದಲ್ಲಿ ನಿರ್ಮಲವಾದ ಯಶಸ್ಸನ್ನು ಹೊಂದುತ್ತಾಳೆ.

ಪತಿಯು ವಿದೇಶಗಾಮಿಯಾಗಿದ್ದಾಗ ಪತಿವ್ರತಾ ನಾರಿಯು ನಗು, ಹಾಸ್ಯ, ಪರರ ಮನೆಗೆ ಹೋಗುವುದು, ಜನಸಮಾಜಗಳಲ್ಲಿ ಸೇರುವುದು, ಮಹೋತ್ಸವಾದಿಗಳನ್ನು ನೋಡುವುದು, ಆಡುವುದು, ಓಡುವುದು, ವಾದ್ಯ ಬಾರಿಸುವುದು, ಹಾಡು ಹೇಳುವುದು, (ನಿಂದ್ಯವಾದ ಮಾತುಗಳನ್ನು ಹೇಳುವ ಅಗತ್ಯವೇ ಇಲ್ಲ.) ತನ್ನ ದೇಹದ ಸಂಸ್ಕಾರ ಮತ್ತು ಭೂಷಣಾದಿಗಳನ್ನು ತ್ಯಜಿಸಿಬಿಡುತ್ತಾಳೆ. ಇವುಗಳಲ್ಲಿ ಅವಳ ಮನಸ್ಸೇ ಹೋಗುವುದಿಲ್ಲ.

ಪತಿವ್ರತೆಯಾದ ನಾರಿಯು ಗಟ್ಟಿಯಾಗಿ ಮಾತಾಡುವುದಿಲ್ಲ. ಯಾರಲ್ಲಿಯೂ ಕ್ರೋಧದಿಂದ ಮಾತಾಡುವುದಿಲ್ಲ. ಬಹಳ ಅಧಿಕ

ಪ್ರಸಂಗದ ಮಾತಾಡುವುದಿಲ್ಲ. ಅಪ್ರಿಯವಾಕ್ಯವನ್ನಾಡುವುದಿಲ್ಲ. ಯಾರಲ್ಲಿಯೂ ಜಗಳಾಡುವುದಿಲ್ಲ. ಮತ್ತು ಯಾವಾಗಲು ಖಾಲಿ(ನಿರರ್ಥಕ) ಯಾದ ಮಾತನ್ನಾಡುವುದಿಲ್ಲ.

ಸ್ತ್ರೀಯು ಬಹಳ ಖರ್ಚಿಯುಳ್ಳವಳಾಗಬಾರದು. ಪತಿಯ ಧರ್ಮ ಮತ್ತು ಧನಕ್ಕೆ ವಿರುದ್ಧವಾದ ಕೆಲಸವನ್ನು ಮಾಡಬಾರದು. ಅಸಾವಧಾನ, ಉನ್ಮತ್ತತೆ, ಕ್ರೋಧ, ಈರ್ಷ್ಯಾ, ಮೋಹ, ಅಭಿಮಾನ, ದುಷ್ಟತಾ, ಹಿಂಸೆ, ವಿದ್ವೇಷ, ಅಹಂಕಾರ, ಧೂರ್ತತಾ, ನಾಸ್ತಿಕತಾ, ದುಃಸಾಹಸ, ಕಳವು ಮತ್ತು ಡಂಭ ಇವುಗಳನ್ನು ಬಿಡಬೇಕು.

ಯಾವ ಸಾಧ್ವಿಯಾದ ಸ್ತ್ರೀಯು ಪತಿಯು ಕಾಯಿಲೆಯಲ್ಲಿದ್ದಾಗ ತಾನೂ ಪೀಡಿತಳಾಗುತ್ತಾಳೋ, ಪತಿಯ ಆನಂದದಿಂದ ಆನಂದಿಸುತ್ತಾಳೋ, ಪತಿಯ ಪರದೇಶಗಮನದಿಂದ ಕೃಶಳೂ ಮಲಿನಳೂ ಆಗುತ್ತಾಳೋ, ಪತಿಯ ಮರಣಾನಂತರ ಸತಿಯಾಗುತ್ತಾಳೋ, ಅವಳನ್ನೇ ಪತಿವ್ರತೆ ಎಂದು ತಿಳಿಯಬೇಕು.

# ಮೂವರು ಗೃಹಸ್ಥರು.

ಎಷ್ಟೋ ಸಲ ನನಗೆ ಕಾರ್ಯಗಳ ದೆಸೆಯಿಂದ ಬೇರೆ ಶಹರಗಳಿಗೆ ಮತ್ತು ಹಳ್ಳಿಗಳಿಗೆ ಹೋಗಿ ನನ್ನ ಸ್ನೇಹಿತರ ಮತ್ತು ಕುಟುಂಬದವರ ಮನೆಯಲ್ಲಿಯೂ ಇರಬೇಕಾಗಿ ಬಂತು. ಅವರಲ್ಲಿ ಕೆಲವು ಗೃಹಗಳಲ್ಲಿ ನಾನು ನೋಡಿದ ಕೆಲವು ಸಂಗತಿಗಳನ್ನು ಇಲ್ಲಿ ತಿಳಿಸುತ್ತೇನೆ. ಅದರಿಂದ ತಿಳುವಳಿಕೆಯುಳ್ಳ ಹುಡುಗಿಯರು ತಮಗೆ ಬೇಕಾದದ್ದನ್ನು ಆರಿಸಿಕೊಳ್ಳಲಿ.

ನನ್ನ ಒಂದು ಕುಟುಂಬದವರ ಮನೆಯಲ್ಲಿ ನನಗೆ ಬಹಳ ದಿನಗಳವರೆಗೆ ಇರಬೇಕಾಗಿ ಬಂತು. ಆ ಮನೆಯ ಯಜಮಾನಿಯು (ಗೃಹಿಣಿ) ಬಹಳ ಕಷ್ಟಪಡುವವಳಾಗಿದ್ದಳು. ಅವಳು ಎಷ್ಟು ಕೆಲಸಕಾರ್ಯಗಳನ್ನು ಮಾಡುತ್ತಿದ್ದಳೆಂದರೆ ಅವಳಿಗೆ ಸರಿಯಾದ ಹೊತ್ತಿಗೆ ಊಟಮಾಡಲು ಸಹ

ಸಮಯ ಸಿಗುತ್ತಿರಲಿಲ್ಲ. ಅವಳು ಪ್ರತಿನಿತ್ಯ ಸಾಯಂಕಾಲ ಹಳೆಬಟ್ಟೆ, ಕಾಲುಚೀಲ ಮತ್ತು ಹಳೆಅಂಗಿಗಳನ್ನು ಸರಿಪಡಿಸುತ್ತಿದ್ದಳು (ಹೊಲಿಯು ತ್ತಿದ್ದಳು). ಅಗಸರವಳು ಬಟ್ಟೆ ಮಡಿಮಾಡಿ ತೆಗೆದುಕೊಂಡು ಬಂದರೆ ಆ ಬಟ್ಟೆಗಳನ್ನು ಎಣಿಸಿಕೊಂಡು ಸರಿಯಾಗಿ ನೋಡಿಕೊಳ್ಳುವಳು. ಯಾಕಂದರೆ—ಯಾವದಾದರೂ ಹರಿದುಹೋಗಿದೆಯೋ ಅಥವಾ ಯಾವ ದದ್ದಾದರೂ ಗುಂಡಿ ಹೋಗಿದೆಯೋ ಎಂದು ಚೆನ್ನಾಗಿ ನೋಡಿಕೊಂಡು ಹಾಗಾಗಿದ್ದಲ್ಲಿ ತತ್ಕ್ಷಣವೇ ಅದನ್ನು ಸರಿಪಡಿಸುತ್ತಿದ್ದಳು. ದೀಪಾವ ಳಿಯ ಮೊದಲು ಒಂದು ಸಲ ಎಲ್ಲಾ ಸಾಮಾನುಗಳನ್ನೂ ತಾನೇ ತೆಗೆದು ಗುಡಿಸಿ, ಸಾರಿಸಿ ಎಲ್ಲಿ ಕೂಲಿಯವರು ಹೋಗಲು ಆಗುವುದಿಲ್ಲವೋ, ಅಲ್ಲಿ ತಾನೇ ಶುದ್ಧ(ಸ್ವಚ್ಛ)ಮಾಡಿ ಮತ್ತೆ ಎಲ್ಲಾ ಸಾಮಾನುಗಳ ಧೂಳು ಝಾಡಿಸಿ, ಒರಿಸಿ, ತೊಳೆದು ಮೊದಲಂತೆಯೇ ಆಯಾಯ ಸ್ಥಾನದಲ್ಲಿ ರಿಸುತ್ತಿದ್ದಳು.

ಆ ಮನೆಯ ಅಂಗಳವೂ ಕೋಣೆಗಳೂ ನಿತ್ಯ ಎಷ್ಟು ಸ್ವಚ್ಛವಾ ಗಿರುತ್ತಿತ್ತೆಂದರೆ ಏನೂ ಹಾಸಿಕೊಳ್ಳದೆಯೇ ಕುಳಿತುಕೊಳ್ಳಬಹುದಾ ಗಿತ್ತು. ಗೃಹಿಣಿಯು ಗೃಹಸಾಮಾನುಗಳನ್ನೆಲ್ಲಾ ಎಷ್ಟು ಚೆನ್ನಾಗಿ ಆಯಾಯ ಸ್ಥಳದಲ್ಲಿ ಸರಿಯಾಗಿಟ್ಟದ್ದು ನೋಡಿದರೆ ನೋಡಿದವರ ಮನಸ್ಸಿಗೆ ಬಹಳ ಸಂತೋಷವಾಗುತ್ತಿತ್ತು. ಆ ಸ್ತ್ರೀಗೆ ಬಹಳ ಹುಡು ಗರು ಮಕ್ಕಳಿದ್ದರು. ಬಹಳಮಾಡಿ ಇಷ್ಟು ಮಕ್ಕಳಿರುವ ಮನೆಯಲ್ಲಿ ಸ್ವಚ್ಛತೆಯು ಇಷ್ಟು ಚೆನ್ನಾಗಿ ಏರ್ಪಟ್ಟಿರುವುದಿಲ್ಲ. ಆದರೆ ನಾನು ಯಾವ ಮನೆಯ ಕುರಿತು ಬರೆಯುತ್ತಿದ್ದೇನೋ, ಅಲ್ಲಿಯ ಸ್ಥಿತಿಯೇ ಬೇರೆ. ಅಲ್ಲಿಯ ಯಜಮಾನಿಯು ಹೇಗೆ ನಿರ್ಮಲಳೂ ಚತುರಳೂ ಆಗಿದ್ದಾಳೋ, ಹಾಗೆಯೇ ಅವಳ ಪುತ್ರರನ್ನೂ ಪುತ್ರಿಯರನ್ನೂ ಅದೇ ರೀತಿ ಇಟ್ಟುಕೊಂಡಿದ್ದಾಳೆ. ಅವಳ ಪುತ್ರಿಯರು ಬಹಳ ಕೆಲಸಗಳಲ್ಲಿ ಅವಳಿಗೆ ಸಹಾಯಕರಾಗುತ್ತಿದ್ದರು. ನಾನು ಒಂದು ದಿನ ಅವಳು ತನ್ನ ದೊಡ್ಡಮಗಳನ್ನು ಕೂಡಿಕೊಂಡು ಒಂದು ಕಡೆ ಬಿದ್ದುಹೋದ ಸುಣ್ಣ ವನ್ನು ಸರಿಪಡಿಸುತ್ತಿದ್ದದ್ದನ್ನು ನೋಡಿದೆನು. ಎಂಥಾ ಚಮತ್ಕಾರದ

ಕೆಲಸ. ಎಷ್ಟು ಚೆನ್ನಾಗಿ ಬಿದ್ದ ಸುಣ್ಣವನ್ನು ತೆಗದು ಸರಿಯಾಗಿ ಮಾಡಿಬಿಟ್ಟಿದ್ದಳು. ಮೂರುನಾಲ್ಕು ದಿನ ಒಣಗಿದ ಮೇಲೆ ನೋಡು ವಾಗ ಹೊಸತಾಗಿಯೇ ತೋರುತ್ತಿತ್ತು. ಎಲ್ಲಾ ಕಡೆಗಳಲ್ಲಿಯೂ ಎಲ್ಲಿಯಾದರೂ ಒಂದು ಕಡೆ ಸಹ ಏನಾದರೂ ಕಲೆಯೂ ಗಾಯವೂ ಏನೂ ಕಾಣುತ್ತಿರಲಿಲ್ಲ. ಎಲ್ಲಾದರೂ ಒಂದು ಕಡೆ ಸ್ವಲ್ಪ ಕೆಟ್ಟುಹೋ ಗಿದ್ದರೆ ಸ್ವತಃ ಯಜಮಾನಿಯಾಗಲೀ ಅಥವಾ ಅವಳ ದೊಡ್ಡ ಮಗಳಾ ಗಲೀ ಬಂದು ಕೂಡಲೇ ಸುಣ್ಣಹಚ್ಚಿ ಸರಿಪಡಿಸಿಬಿಡುತ್ತಿದ್ದರು. ಅವಳ ಮನೆಯಲ್ಲಿ ಸಣ್ಣವಸ್ತುಗಳಾಗಲೀ ದೊಡ್ಡವಸ್ತುಗಳಾಗಲೀ ಯಾವಾಗ ಏನು ಬೇಕಾದರೂ ತಯಾರಿರುತ್ತಿತ್ತು. ಕಾಯಿಲೆಯವರ ಪಥ್ಯಪಾನಕ್ಕೆ ಬೇಕಾದ ಸಾಬಕ್ಕಿ, ಅರಾರೋಟು ಮೊದಲಾದವುಗಳನ್ನೂ, ಮತ್ತೆ ಕೆಲವು ಔಷಧಗಳನ್ನೂ, ಜೇನು, ಕಸ್ತೂರಿ, ಕರ್ಪೂರದ ಅರಕ್, ಪಿಪರ್‌ಮೆಂ ಟಿನ ಎಣ್ಣೆ ಮೊದಲಾದವುಗಳನ್ನೂ ಮತ್ತು ಇದೇ ತರದ ಹಲವು ವಸ್ತು ಗಳನ್ನೂ ಗೃಹಿಣಿಯು ಬಹಳ ಜಾಗ್ರತೆಯಿಂದ ಸಂಗ್ರಹಿಸಿ ಇಡುತ್ತಿದ್ದಳು. ಮನೆಯ ಯಜಮಾನನ ಆದಾಯವೇನೂ ಅಷ್ಟು ಹೆಚ್ಚಾಗಿರಲಿಲ್ಲ. ಆದಾಗ್ಯೂ ಕೂಡ ಗೃಹಿಣಿಯು ಜಾಗರೂಕತೆಯಿಂದಲೂ ಚತುರತನ ದಿಂದಲೂ ಆ ಮನೆಯಲ್ಲಿ ಯಾವ ವಸ್ತುವಿಗೂ ಕಡಿಮೆ ಇರಲಿಲ್ಲ. ಎಲ್ಲರೂ ಸುಖಸಂತೋಷದಲ್ಲಿರುತ್ತಿದ್ದರು. ನಾನು ಅಲ್ಲಿ ಯಾವ ಒಳ್ಳೇ ಸ್ಥಿತಿಯನ್ನು ನೋಡಿದೆನೋ, ಅದನ್ನು ಅವರಿಗೆ ಹೇಳಿಯೇ ಬಿಟ್ಟೆನು. ಆದರೂ ಅಲ್ಲಿ ಒಂದೆರಡು ಮಾತುಗಳ ಕೊರತೆಯಿತ್ತು. ಅದೇನಂದರೆ ಮಕ್ಕಳು ಶಾಲೆಗೆ ಕಳುಹಿಸಲ್ಪಡುತ್ತಿದ್ದರು. ಆದರೂ ಈಶ್ವರನು ಯಾರು? ಧರ್ಮವೆಂದರೇನು? ಎಂಬವರ ಶಿಕ್ಷಣವು ಅವರಿಗೆ ಕೊಡಲ್ಪಡುತ್ತಿರಲಿಲ್ಲ. ಇದರ ಫಲವಾಗಿ ಹುಡುಗರು ಇಂಗ್ಲೀಷು ಮರ್ಜಿಯನ್ನೇ ಹೆಚ್ಚಾಗಿ ಕಲಿಯುತ್ತಿದ್ದರು. ತಮ್ಮ ಹಳೆಯ ಧರ್ಮ, ನೀತಿಗಳ ಮಾತನ್ನೆ ಅವ ರರಿಯರು. ಪೂರ್ವದೇಶಕ್ಕನುಗುಣವಾದ ಭಗವಂತನ ಕರ್ತವ್ಯ, ದಯೆ, ಧರ್ಮ ಇವುಗಳ ಶಿಕ್ಷಣವನ್ನು ಕೊಟ್ಟಿದ್ದರೆ ಎಷ್ಟು ಚೆನ್ನಾಗಿ ತೋರು ತ್ತಿತ್ತು. ಈ ಮಾತಿನ ಕೊರತೆಯೊಂದಲ್ಲದಿದ್ದರೆ ಈ ಗೃಹಸ್ಥಾಶ್ರಮವು ಎಲ್ಲರಿಗೂ ಪೂರ್ಣ ಆದರ್ಶ(ನಮೂನ)ಪ್ರಾಯವಾಗುತ್ತಿತ್ತು.

ಇನ್ನು ಎರಡನೇ ಗೃಹಸ್ಥನ ಸ್ಥಿತಿಯನ್ನು ಕೇಳಿರಿ. ಇವರು ಎಲ್ಲರೂ ಸಂತೋಷವಂತರೇ. ನೌಕರರ, ಚಾಕರರ ಕಡಿಮೆ ಏನೂ ಇಲ್ಲ. ಮನೆಯಲ್ಲಿ ಗೃಹಸ್ಥ, ಗೃಹಿಣಿ, ಐದಾರು ಹುಡುಗರು ಮತ್ತು ಹುಡುಗಿಯರು, ಒಬ್ಬಿಬ್ಬರು ಕುಟುಂಬದವರೂ ಮತ್ತು ಆರೇಳು ನೌಕರರೂ, ದಾಸಿಯರೂ ಸಹ ಇದ್ದರು.

ಗೃಹಸ್ಥನು ತಿಂಗಳೊಂದಕ್ಕೆ ಆರು ಏಳುನೂರು ರೂಪಾಯಿ ಸಂಪಾದಿಸುತ್ತಿದ್ದನು. ಮನೆಯು ದೊಡ್ಡದು ಮತ್ತು ಸುಂದರವಾಗಿದೆ. ಸಾಮಾನುಗಳೆಲ್ಲಾ ಹೆಚ್ಚು ಬೆಲೆಬಾಳುವಂಥಾದ್ದಾಗಿ ಸೊಗಸಾದದ್ದಾಗಿತ್ತು. ಆದರೆ ಮಲಿನವಾಗಿದ್ದದ್ದನ್ನು ನೋಡಿದರೆ ದುಃಖಬರುತ್ತಿತ್ತು. ಬಾಗಲು, ಕಿಟಕಿ, ಗೋಡೆ, ನೆಲ ಇವೆಲ್ಲವುಗಳೂ ಕೊಳಕಾಗಿ ಧೂಳಿನಿಂದ ತುಂಬಿಕೊಂಡಿರುತ್ತಿದ್ದವು. ಗೃಹಿಣಿಯು ಹೇಳುವುದೇ ತಡ, ಎಲ್ಲವೂ ಸ್ವಚ್ಛವಾಗಿ ನಿರ್ಮಲವಾಗಬಹುದು. ಆದರೆ ನಿರ್ಮಲತ್ವದ ಕಡೆಗೆ ಅವಳ ಧ್ಯಾನವೇ ಇರುತ್ತಿರಲಿಲ್ಲ. ನಾನು ಅವರ ಸ್ನೇಹಿತನಾಗಿದ್ದೆನು. ಅವರಲ್ಲಿಗೆ ಹೋದೆನು. ಮನೆಯಲ್ಲಿ ಊಟ ತಿಂಡಿಯು ಯಾವ ಸಾಮಾನಿಗೂ ಯಾವಾಗಲೂ ಕಡಿಮೆ ಇರಲಿಲ್ಲ. ಆದರೂ ಅದರ ವಿನಿಯೋಗ ಕಡಿಮೆಯಾಗಿದ್ದದ್ದರಿಂದ ನನಗೆ ಸರಿಯಾದ ಹೊತ್ತಿಗೆ ಊಟ ಸಹ ಸಿಗುತ್ತಿರಲಿಲ್ಲ. ಅಲ್ಲದೆ ಅಡಿಗೆಯೂ ಸಹ ಸರಿಯಾಗಿ ಒಂದೇ ಹೊತ್ತಿಗೆ ತಯಾರು ಸಹ ಆಗುತ್ತಿರಲಿಲ್ಲ. ನಾನು ಹೊರಗೆ ಕೂತಿದ್ದೆನು. ಮೊದಲನೇ ದಿನ ನನಗೆ ಮೂರು ಸಲ ಮಿಠಾಯಿ, ಹಾಲು, ಹಣ್ಣು ವಗ್ಯೆರೆ ಬಂತು. ಮೂರನೇದಿನ ಒಂದು ಸಲವೂ ಯಾರೂ ಕೇಳಲಿಲ್ಲ. ಒಂದು ದಿನ ನಾನು ಊಟವಾದ ಮೇಲೆ ಕೈಕಾಲು ತೊಳೆದುಕೊಂಡು ವೀಳ್ಯಕ್ಕೋಸ್ಕರ ಬಹಳ ಕಾದು ನಿಂತಿದ್ದೆ. ಯಾರೂ ವೀಳ್ಯವನ್ನು ತರಲಿಲ್ಲ. ಸ್ವಲ್ಪ ಹೊತ್ತಿನಲ್ಲಿ ಒಂದು ಪಾತ್ರೆಯಲ್ಲಿ ಹಾಲು ಬಂತು. ಒಂದು ದಿನ ಹಾಲಿಗೆ ತುಂಬಾ ಸಕ್ಕರೆ ಹಾಕಿತ್ತು. ಒಂದು ದಿನ ಏನೇನೂ ಸಕ್ಕರೆ ಇರಲೇ ಇಲ್ಲ. ಯಜಮಾನನಿಗೆ ಇಷ್ಟು ಉತ್ಪತ್ತಿ ಇತ್ತು. ಆದರೂ ಅವನಲ್ಲಿ ನಿಜವಾಗಿಯೂ ಒಂದು ಕಾಸು ಕೂಡಾ ಉಳಿಯುತ್ತಿರಲಿಲ್ಲ. ಬಹಳ ಕಷ್ಟದಿಂದ ಅವನು

ಅಲ್ಪಸ್ವಲ್ಪ ಉಳಿಸಿಕೊಂಡಿದ್ದರೂ ಅದು ಅವನ ಆದಾಯದ ಕಡೆಗೆ ನೋಡಿದರೆ ಬಹಳ ಅಲ್ಪವಾಗಿತ್ತು. ನಾನು ಹೀಗಾಗಲು ಕಾರಣವೇನೆಂದು ಬಹಳ ಯೋಚಿಸಿ ನೋಡಿದೆನು. ಕಡೆಗೆ ಬಹಳ ವಿಚಾರಿಸಿದಲ್ಲಿ ಮನೆಯ ಗೃಹಿಣಿಯು ಶಿಕ್ಷಿತಳಲ್ಲವೆಂದು ತಿಳಿದುಬಂತು. ಅವಳು ಇಷ್ಟು ದೊಡ್ಡ ಗೃಹದ ಗೃಹಿಣಿಯಾಗಲು ಯೋಗ್ಯಳಾಗಿರಲಿಲ್ಲ. ಅವಳು ಯಾವ ಕರ್ತವ್ಯವನ್ನು ತನ್ನ ಕೆಲಸವನ್ನಾಗಿ ಎಣಿಸಿದ್ದಳೋ, ಅದನ್ನು ತನ್ನ ಕೈಯಿಂದ ಮಾಡಲು ಅವಳು ಚಿಕ್ಕಂದಿನಿಂದಲೂ ಕಲಿತಿದ್ದರೆ, ಈಗ ಬೇಕಾದರೆ ಅವಳು ಕೈಯಿಂದ ಮಾಡದಿದ್ದರೂ ತನ್ನ ನೌಕರರಿಂದ ಎಲ್ಲಾ ಕೆಲಸಗಳನ್ನು ಒಳ್ಳೇ ರೀತಿಯಲ್ಲಿ ಮಾಡಿಸುತ್ತಿದ್ದಳು. ಈ ಗೃಹಸ್ಥನ ದುರ್ದಶೆಯನ್ನು ನೋಡಿ ನನ್ನ ಹೃದಯಕ್ಕೆ ಒಂದು ತರದ ಘಾಯವಾದಂತೆ ಆಯಿತು.

ಇನ್ನು ಮತ್ತೊಬ್ಬ ಗೃಹಸ್ಥನ ಅವಸ್ಥೆಯನ್ನು ಕೇಳಿರಿ. ಗೃಹಿಣಿಯ ವಯಸ್ಸೇನೂ ಹೆಚ್ಚಾಗಿರಲಿಲ್ಲ. ಅವರಿಗೆ ನೌಕರರು, ದಾಸಿಯರು ಯಾರೂ ಇರಲಿಲ್ಲ. ಗೃಹಸ್ಥನೂ ಅವನ ಮೂವರು ಮಕ್ಕಳೂ ಇವರ ಜೊತೆಯಲ್ಲಿ ಸಂಸಾರವನ್ನು ನಡಿಸಿಕೊಳ್ಳುತ್ತಿದ್ದಳು. ದೊಡ್ಡ ಹುಡುಗನು ಆರು ವರ್ಷದವನು. ಸುಳ್ಳು ಹೇಳುವ ಹೆಸರೇ ಗೊತ್ತಿಲ್ಲ. ಒಂದು ದಿನ ಗೃಹಿಣಿಯು ಅಡಿಗೆಮಾಡುತ್ತಿದ್ದಳು. ಮೂರು ವರ್ಷದ ಅವಳ ಮಗಳು ಬಾಗಲ ಬಳಿಯಲ್ಲಿ ಕುಳಿತುಕೊಂಡು ತಾಯಿಯ ಹತ್ತಿರ ಮಾತಾಡುತ್ತಿದ್ದಳು. ಒಂದು ವರ್ಷದ ಮಗುವೊಂದು ನಲಿಯುತ್ತಾ ಒಂದು ಸಲ ತನ್ನ ತಾಯಿಯ ಬೆನ್ನು ತಟ್ಟುತ್ತಾ ನಿಲ್ಲುತ್ತಿತ್ತು. ಒಂದು ಸಲ ಕಲಿಸಿಟ್ಟಿದ್ದ ಹಿಟ್ಟನ್ನು ತಾಯಿಯಲ್ಲಿ ಕೇಳಿ ಸ್ವಲ್ಪ ತೆಗದುಕೊಂಡು ಆಡುತ್ತಿತ್ತು. ದೊಡ್ಡ ಮಗನು ಹೊರಗಡೆ ಕೋಣೆಯಲ್ಲಿ ಕುಳಿತಿದ್ದನು. ಮಾತೆಯು ಅಡಿಗೆಮಾಡುತ್ತಾ ಮಧ್ಯದಲ್ಲಿ ಮಕ್ಕಳನ್ನು ಮುದ್ದಾಡುತ್ತಿದ್ದಳು. ಮತ್ತು ತನಗೆತಾನೇ ಒಂದೊಂದು ಸಲ ಮೆಲ್ಲನೆ ಹಾಡುವಳು. ಇಷ್ಟರಲ್ಲಿ ಗೃಹಸ್ಥನು ಹೊರಗಿನಿಂದ ಸಾಮಾನನ್ನು ತೆಗದುಕೊಂಡು ಬಂದನು. ಮತ್ತು ಮಕ್ಕಳನ್ನು ಕರೆದು ಅವರನ್ನು ಕರೆದುಕೊಂಡು ಸ್ನಾನಕ್ಕೋಸ್ಕರ ಹೊರಟುಹೋದನು. ಅಲ್ಲಿ ಮಕ್ಕಳನ್ನು ಸ್ನಾನಮಾಡಿಸಿ, ಮೈ ಒರಸಿ, ಅವುಗಳಿಗೆ ಬಟ್ಟೆ ಹಾಕಿ,

ತಾನು ಸ್ನಾನಮಾಡಿ, ಜಪಾಹ್ನಿಕಗಳನ್ನು ತೀರಿಸಿಕೊಂಡು, ಒಣಗಿದ ಬಟ್ಟೆಯನ್ನುಟ್ಟುಕೊಂಡು, ಒದ್ದೆಯನ್ನು ಒಗೆದು ಒಣಗಲು ಹಾಕಿದನು. ಇತ್ತ ಊಟಕ್ಕೆ ಬಡಿಸಿಯಾಯಿತು. ಗೃಹಸ್ಥನು ತನ್ನ ಅತಿಥಿಯನ್ನು ಮತ್ತು ಮಕ್ಕಳನ್ನು ಕೂಡಿಕೊಂಡು ಊಟಕ್ಕೆ ಕುಳಿತನು. ಗೃಹಿಣಿಯು ಎಲ್ಲರಿಗೂ ಊಟವಾದ ಮೇಲೆ ಊಟಮಾಡಿದಳು. ಮತ್ತೆ ಸ್ವಲ್ಪ ಹೊತ್ತು ಮಲಗಿ ವಿಶ್ರಮಿಸಿಕೊಂಡೆದ್ದು ಏನಾದರೂ ಸ್ವಲ್ಪ ಹೊತ್ತು ಹೊಲಿಗೆಕೆಲಸ ಮಾಡುವಳು. ಏನಾದರೂ ಬರೆಯುವಳು. ಅಲ್ಲದೆ ಸಾಯಂಕಾಲಕ್ಕೆ ಮೊದಲೇ ಬೇರೇನಾದರೂ ಕೆಲಸದಲ್ಲಿ ತೊಡಗುವಳು.

ಈ ಗೃಹದ ಕೆಲಸಗಳು ಬಹಳ ಸ್ವಚ್ಛವಾಗಿ, ಸುಂದರವಾಗಿ ಮತ್ತು ಕಾಯಿದೆಯಿಂದ ಸರಿಯಾದ ವ್ಯವಸ್ಥೆಯಿಂದ ಹೊತ್ತಿಗೆ ಸರಿಯಾಗಿ ಆಗುತ್ತಿದ್ದವು. ಗೃಹಸ್ಥನೂ ಗೃಹಿಣಿಯೂ ಇಬ್ಬರೂ ಪರಮಾತ್ಮನಿಗೆ ಹೆದರುತ್ತಿದ್ದರು. ಅವರು ಪ್ರತಿನಿತ್ಯ ರಾತ್ರಿ ಎಲ್ಲಾ ಕೆಲಸಗಳಿಂದ ನಿವೃತ್ತರಾದಮೇಲೆ ಒಂದೆರಡು ಘಂಟೆಗಳ ವರೆಗೆ ಧರ್ಮಸಂಬಂಧವಾದ ಪುಸ್ತಕವನ್ನೋದುತ್ತಿದ್ದರು. ಇವರು ಬಹಳ ಸೌಖ್ಯದಿಂದ ತಮ್ಮ ಕೆಲಸವನ್ನು ಸಾಗಿಸುತ್ತಿದ್ದರು. ಇವರ ಆಯುವು ಬಹಳ ಸ್ವಲ್ಪವಾಗಿತ್ತು. ಆದರೂ ಏನೂ ತೊಂದರೆ ಇಲ್ಲ. ಅವರ ಮನಸ್ಸಿನಲ್ಲಿ ಸಂತೋಷವು ತುಂಬಿ ತುಳುಕುತ್ತಿತ್ತು. ಇವರನ್ನೂ ಇವರ ಗೃಹವ್ಯವಸ್ಥೆಯನ್ನೂ ನೋಡಿ ನನಗೆ ಬಹಳ ಆನಂದವಾಯಿತು.

ಈ ಮೂವರು ಗೃಹಸ್ಥರಲ್ಲಿ ನಿಮಗೆ ಯಾರ ಇರುವಿಕೆಯ ಸ್ಥಿತಿಯು ಒಳ್ಳೇದಾಗಿದೆಂಬುದನ್ನು ಈಗ ನೀವು ಹೇಳಿರಿ ನೋಡುವ?

## ದೊಡ್ಡ ವೃದ್ಧೆಯರ ಸನ್ಮಾನ.

ಮನುಷ್ಯರ ಕೈಯಲ್ಲಿ ಸದಾ ಐದು ಬೆರಳುಗಳಿರುತ್ತವೆ. ಒಂದು ಸಲ ನಾಲ್ಕು ಬೆರಳುಗಳಿಗೂ ಒಗ್ಗಟ್ಟಾಯಿತು. ಅವು ನಾಲ್ಕೂ ಏಕವಾಗಿ

ಸ್ನೇಹದಿಂದ ಇರಲಾರಂಭಿಸಿ ಹೇಳುತ್ತಿದ್ದವೇನಂದರೆ—ನೋಡು, ಹೆಬ್ಬೆಟ್ಟು ನಮ್ಮೆಲ್ಲರಿಂದಲೂ ಬೇರೆಯಾಗಿದೆ. ಅದು ಮುದುಕಿಯು, ಕುರೂಪಿಯು. ಇದರ ಹೊಟ್ಟೆಯೂ ಬಹಳ ದೊಡ್ಡದಾಗಿ ಹೊರಗೆ ಬಂದಿದೆ. ಈ ಮುದುಕಿಯು ಇಲ್ಲಿಂದ ಹೋಗಿಬಿಟ್ಟಿದ್ದರೆ ಒಳ್ಳೇದಾಗುತ್ತಿತ್ತು. ಯಾವಾಗ ನಾವು ನಾಲ್ವರೂ ಸೇರಿ ಏನಾದರೂ ಕೆಲಸಮಾಡುತ್ತಿದ್ದರೆ ಇದು ಬಂದು ಫಕ್ಕನೇ ಮಧ್ಯೇ ಸೇರುತ್ತದೆ. ಇದಕ್ಕೇಕೆ ಇಷ್ಟು ಜಂಭ. ಇದನ್ನು ಮನೆಯಿಂದ ಹೊರಗೆ ಹಾಕುವ ಹಂಚಿಕೆಯನ್ನು ಹುಡುಕಬೇಕು ಎಂದು ಮಾತಾಡುತ್ತಿದ್ದವು.

ಹೆಬ್ಬೆಟ್ಟು ಒಂದು ದಿನ ಈ ನಾಲ್ವರ ಮಾತುಗಳನ್ನು ಎಲ್ಲಿಂದಲೋ ಕೇಳಿಬಿಟ್ಟಿತು. ಮತ್ತು ಅವುಗಳನ್ನು ಕುರಿತು ಹೀಗೆಂದು ಹೇಳತೊಡಗಿತು. "ಮಕ್ಕಳೇ! ನಿಮ್ಮ ಬುದ್ಧಿ ಯಾಕೆ ಹೀಗಾಯಿತು? ವೃದ್ಧರಾದ ಕೂಡಲೇ ಜನರು ದೇಶದ ಹೊರಯಾಗುತ್ತಾರೆಯೇನು? ನಿಮ್ಮ ತಿಳುವಳಿಕೆ ಎಲ್ಲಾ ತಪ್ಪು. ಸುಮ್ಮಸುಮ್ಮಗಿನ ಜಂಭ ಒಳ್ಳೇದಲ್ಲ. ಒಂದು ದಿನವಾದರೂ ನಾನು ನಿಮ್ಮನ್ನು ರಕ್ಷಿಸದಿದ್ದರೆ ಮತ್ತು ಬುದ್ಧಿವಾದ ಹೇಳದಿದ್ದರೆ ನಿಮ್ಮ ಕೆಲಸವೆಲ್ಲಾ ಮಣ್ಣುಗೂಡುವುದು" ಎಂದಿತು.

ಇದಕ್ಕೆ ಕಿರಿಬೆರಳು ಹೇಳತೊಡಗಿತೇನಂದರೆ—ಹೋಗು ಹೋಗು. ಇವಳ ನಂಬಿಗೆಯಿಂದಲೇ ನಾವುಗಳು ಜೀವಿಸುತ್ತೇವೆ. ಇಷ್ಟು ಮಾತು ಹೇಳಲಿಕ್ಕೆ ಇವಳು ನಮ್ಮ ಯಾವ ಕೆಲಸವನ್ನು ಸುಧಾರಿಸುತ್ತಾಳೆ?

ಹೆಬ್ಬೆಟ್ಟು ಉತ್ತರ ಹೇಳುತ್ತದೆ. ನೋಡು ಕಿರಿಬೆರಳೆ! ಒಳ್ಳೇದು. ಸೂಜಿ ಹಿಡಿ ನೋಡೋಣ. ನಾನಿಲ್ಲದಿದ್ದರೆ ಹ್ಯಾಗೆ ಹೊಲಿಯುತ್ತೀರೋ, ಊಟಕ್ಕೆ ತುತ್ತನ್ನು ಎತ್ತಿರಿ ನೋಡೋಣ. ನಾನು ಹಿಂದಿನಿಂದ ಇರದಿದ್ದರೆ ನೀವು ಹ್ಯಾಗೆ ಊಟಮಾಡುತ್ತೀರೋ? ಅದನ್ನು ನನಗೆ ನೋಡಬೇಕಾಗಿದೆ. ನೋಡು; ಜನರು ನೋಡುತ್ತಿರುವಂತೆಯೇ ನಾನು ವೃದ್ಧಳಾದೆನು. ನನ್ನ ಮಾತನ್ನು ಕೇಳಿ ಅದರಂತೆ ನಡೆದರೆ ನಿಮ್ಮ ಮೇಲೆ ಯಾವ ವಿಪತ್ತೂ ಬರಲಾರದು. ದೊಡ್ಡ ವೃದ್ಧರ ಕೆಲಸವೇ

ಇದು. ಏನಂದರೆ—ಸಣ್ಣವರ ಕೆಲಸಗಳಲ್ಲಿ ದೃಷ್ಟಿಯಿಟ್ಟಿರುವುದೂ, ಮತ್ತು ಅವರನ್ನು ಯಾವಾಗಲೂ ರಕ್ಷಿಸುತ್ತಿರುವುದೂ ವೃದ್ಧರಿಂದ ಗುಣ ಕಲಿಯುವುದೇ ನಿಮ್ಮ ಕೆಲಸವು. ಯಾವಾಗ ನೀವು ವೃದ್ಧೆಯರಾಗುವಿರೋ, ಆಗ ನಿಮ್ಮ ಮಕ್ಕಳೂ ನಿಮ್ಮಿಂದ ಗುಣ ಕಲಿಯುವರು.

## ಗೃಹಿಣೀ.

ಗೃಹಿಣಿಯೇ ಗೃಹಸ್ಥಾಶ್ರಮದ ಮೂಲವು. ಈ ಮೂಲವು ಎಷ್ಟು ಘಟ್ಟಿಯಾಗಿರುವುದೋ, ಅಷ್ಟೇ ಗೃಹಸ್ಥನ ಗೃಹಸ್ಥಾಶ್ರಮವು ಸುದೃಢವಾಗುವುದು. ಯಾವ ಗೃಹದ ಗೃಹಿಣಿಯು ಪಟುವಾಗಿರುತ್ತಾಳೋ, ಆ ಗೃಹದ ಪರಿವಾರದವರೆಲ್ಲಾ ಸ್ವಲ್ಪವಾದ ಆಯದಿಂದಲೂ ಮತ್ತು ಸ್ವಲ್ಪವಾದ ಖರ್ಚಿನಿಂದಲೂ ಬಹಳ ಸುಖವನ್ನು ಅನುಭವಿಸುತ್ತಿರುತ್ತಾರೆ. ಮತ್ತು ಯಾವ ಗೃಹದ ಗೃಹಿಣಿಯು ಅಪಟುವಾಗಿರುತ್ತಾಳೋ, ಅಲ್ಲಿಯ ಆಯವು ಎಷ್ಟೇ ಹೆಚ್ಚಾದರೂ ಏಕಾಗಬಾರದು? ಖರ್ಚು ಸಹ ಮಿತಿ ಮೀರೆಯಿಲ್ಲದಂತಾಗುವುದಲ್ಲದೆ ಅಲ್ಲಿಯ ದುಃಖವು ಎಂದೂ ಕಡಿಮೆಯಾಗುವುದಿಲ್ಲ. ಗೃಹಿಣಿಯ ಸುವ್ಯವಸ್ಥೆಯಿಂದ ಸಾಸುವೆಕಾಳಷ್ಟಾದರೂ ನಷ್ಟವಾಗುವುದಿಲ್ಲ. ಅಲ್ಲಿ (ಆಯವು ಎಷ್ಟೇ ಕಡಿಮೆಯಾಗಿದ್ದರೂ) ಯಾವ ತರದ ಕೊರತೆಯೂ ಉಂಟಾಗಿರುವುದಿಲ್ಲ.

ಗೃಹಿಣಿಯು ಗೃಹಲಕ್ಷ್ಮಿಯಲ್ಲವಾಗಿದ್ದರೆ ಮನೆಯ ಲಕ್ಷ್ಮಿಯು ತುಫಾನಿನಲ್ಲಿ ಅಂಬಿಗನಿಲ್ಲದ ದೋಣಿಯಂತೆ ಮುಳುಗಿಹೋಗುತ್ತದೆ. ಗೃಹಸ್ಥಾಶ್ರಮದಲ್ಲಿದ್ದು ಸುಖಪಡೆಯುವ ನಿಜವಾದ ಆಧಾರವೇ ಗೃಹಿಣಿಯು. ಮನುಷ್ಯನು ಈ ಆಧಾರದ ಧೈರ್ಯದಿಂದಲೇ ಬ್ರಹ್ಮಾಂಡ ಮತ್ತು ಬ್ರಹ್ಮಾಂಡಪತಿಯ ಜೊತೆಯಲ್ಲಿ ಕೂಡಿಕೊಂಡು ಕೆಲಸಮಾಡುತ್ತಾನೆ. ಆದಕಾರಣ ಈ ಮೂಲ ಆಧಾರದಲ್ಲಿ ಏನಾದರೂ ದೋಷವುಂಟಾದರೆ ಮನುಷ್ಯನಿಗೆ ಜಗತ್ತಿನಲ್ಲಿರುವ ಸಂಬಂಧವೇ ಮುರಿದಂತಾಗುತ್ತದೆ.

ಇದರಿಂದಲೇ ಎಲ್ಲಿ ಗೃಹಿಣಿಯು ಒಳ್ಳೇಯುವಳಾಗಿರುವುದಿಲ್ಲವೋ, ಅಲ್ಲಿ ದಿನವಹಿ ಏನಾದರೂ ನಷ್ಟ ಉಂಟಾಗುತ್ತಲೇ ಇರುತ್ತದೆ. ಅಲ್ಲದೆ ಅಲ್ಲಿಯ ಹಾಹಾಕಾರವು ಎಂದೂ ಅಳಿಯುವುದಿಲ್ಲ.

ಗೃಹಸ್ಥಾಶ್ರಮವು ಎಲ್ಲಾ ಆಶ್ರಮಗಳಿಗೂ ಆಶ್ರಯಸ್ಥಾನವು. ಆದಕಾರಣ ಅದು ಎಲ್ಲಕ್ಕಿಂತಲೂ ದೊಡ್ಡ ಆಶ್ರಮವಾಗಿ ಎಣಿಸಲ್ಪಡುತ್ತದೆ. ಈ ಎಲ್ಲಕ್ಕೂ ದೊಡ್ಡ ಆಶ್ರಮದಲ್ಲಿ ಎಲ್ಲಕ್ಕೂ ದೊಡ್ಡ ಪದವಿಯಲ್ಲಿ ನಾರಿಯನ್ನು ಕುಳ್ಳಿರಿಸಲಾಗುತ್ತದೆ. ನಾರಿಯು ಎಲ್ಲಾ ಪ್ರಾಣಿಗಳ ಮಾತೃರೂಪದಿಂದ ಜಗತ್ತಿನ ಬಾಲಕ, ಯುವಕ, ಜರಠ, ನರ, ನಾರೀ, ಅತಿಥಿ, ಅಭ್ಯಾಗತ, ಪಶು, ಪಕ್ಷಿ, ಕೀಟ, ಪತಂಗ, ವೃಕ್ಷ, ಲತಾದಿಗಳನ್ನು ತೃಪ್ತಿಪಡಿಸುತ್ತಾಳೆ.

ಹೀಗೆಯೇ ಎಲ್ಲಾ ಪ್ರಾಣಿಗಳ ಪ್ರಾಣಸ್ವರೂಪಿಣಿಯಾದ ಗೃಹಿಣಿಯು ಎಲ್ಲಾ ವಸ್ತುಗಳಲ್ಲಿಯೂ ಪ್ರೇಮದೃಷ್ಟಿಯನ್ನು ಯಾವ ರೀತಿ ಇಡಬೇಕೆಂದರೆ ಈ ವಿಷಯವಾದ ಒಂದು ಚಿಕ್ಕ ಕಥೆಯು ಇಲ್ಲಿ ಹೇಳಲ್ಪಡುತ್ತದೆ.

ದ್ರವಿಡದೇಶದಲ್ಲಿ ಕಾಂಚೀ ಎಂಬ ಹೆಸರಿನ ನಗರ ಒಂದುಂಟು. ಅಲ್ಲಿ ಕೋಟ್ಯಂತರ ರೂಪಾಯಿಗಳ ಸ್ವಾಮಿಯಾದ ಒಬ್ಬನೊಬ್ಬ ಸೆಟ್ಟಿಯ ಮಗನಾದ ಶಕ್ತಿಕುಮಾರನೆಂಬವನಿದ್ದನು. ಅವನು ಯಾವಾಗ ಹದಿನೆಂಟು ವರ್ಷದವನಾದನೋ, ಆಗ ಚಿಂತಿಸತೊಡಗಿದನೇನಂದರೆ—ಯಾರಿಗೆ ಭಾರ್ಯೆಯಿಲ್ಲವೋ ಅವನಿಗೆ ಸುಖವೆಲ್ಲಿಂದ? ಆದ್ದರಿಂದ ನಾನು ಯಾವ ಉಪಾಯದಿಂದ ಗುಣವತಿಯಾದ ಭಾರ್ಯೆಯನ್ನು ಹೊಂದುವೆನು? ಎರಡನೇಯವರು ಹೋಗಿ ವಧುವನ್ನು ಆರಿಸಿದರೆ ಬಹಳವಾಗಿ ಮನಸ್ಸಿಗೆ ತಕ್ಕವಳಾಗಿರುವುದಿಲ್ಲ. ಅವನು ಹೀಗೆ ಯೋಚಿಸಿ ಒಬ್ಬ ಜ್ಯೋತಿಷಿಯ ವೇಷ ಧಾರಣೆಮಾಡಿಕೊಂಡು, ದುಪಟಿಯನ್ನು ಹೊದ್ದುಕೊಂಡು, ಅದರ ಮೂಲೆಯಲ್ಲಿ ಸ್ವಲ್ಪ ನೆಲ್ಲನ್ನು ಕಟ್ಟಿಕೊಂಡು ದೇಶಾಟನೆಗೆ ಹೊರಟನು. ಯಾರ ಮನೆಯಲ್ಲಿ ಕನ್ಯೆಯರಿರುತ್ತಿದ್ದರೋ, ಅವರು ಅವನನ್ನು ಕನ್ಯೆಯ ಲಕ್ಷಣವನ್ನು ತಿಳಿಯುವವನೆಂದು ತಿಳಿದು ತಮ್ಮ

ಕನ್ಯೆಯರನ್ನು ತೋರಿಸುವರು. ಅವನು ಸಹ ಯಾವಳಾದರೂ ಸುಲಕ್ಷಣವತಿಯಾದ ಕನ್ಯೆಯನ್ನು ನೋಡಿದ ಕೂಡಲೇ ಹೀಗೆಂದು ಹೇಳುವನು:— "ಸುಮತಿ! ನನ್ನ ಬಳಿಯಲ್ಲಿ ಸ್ವಲ್ಪ ಧಾನ್ಯವಿದೆ. ಇಷ್ಟರಿಂದಲೇ ನೀನು ನನ್ನನ್ನು ಭೋಜನದಿಂದ ತೃಪ್ತಿಪಡಿಸುವೆಯಾ" ಎಂದು ಕೇಳುವನು. ಇವನ ಇಂಥಾ ಮಾತುಗಳನ್ನು ಕೇಳಿ ಜನರು ಅವನನ್ನು ಹುಚ್ಚನೆಂದು ತಿಳಿದು ನಕ್ಕು ತಮ್ಮ ಮನೆಯಿಂದ ಹೊರಡಿಸುತ್ತಿದ್ದರು. ಅವನು ಇದೇ ರೀತಿ ಇನ್ನೊಂದು ಮನೆಗೆ ಹೋಗುವನು.

ಒಂದು ದಿನ ಕಾವೇರೀನದಿಯ ದಕ್ಷಿಣತೀರದಲ್ಲಿ ಒಂದು ಮನೆಗೆ ಅವನು ಹೋದನು. ಅಲ್ಲಿ ಒಬ್ಬಳು ಕನ್ಯೆಯು ತನ್ನ ಮಾತಾಪಿತರ ಬಳಿಯಲ್ಲಿ ಕುಳಿತಿದ್ದದ್ದನ್ನು ನೋಡಿದನು. ಅವಳ ಪಿತನ ಐಶ್ವರ್ಯವೆಲ್ಲಾ ನಷ್ಟವಾಗಿಹೋಗಿ ಒಂದು ಹಳೆಯ ಹರಕುಮನೆ ಮಾತ್ರವೇ ಉಳಿದಿತ್ತು. ಅವನು ಈ ಕನ್ಯೆಯನ್ನು ನೋಡಿ: "ಈ ಕನ್ಯೆಯಲ್ಲಿ ಎಲ್ಲಾ ಲಕ್ಷಣಗಳೂ ಒಳ್ಳೇದಾಗಿ ಕಾಣಬರುತ್ತವೆ. ಇಂಥಾ ಮುದ್ದು ಮುಖದವಳು ಎಂದಿಗೂ ಗುಣದಿಂದ ಹಿಂದಾಗಿರಲಾರಳು. ಆದರೂ ಪರೀಕ್ಷೆಮಾಡಿ ನೋಡದೆ ವಿವಾಹಮಾಡಿಕೊಳ್ಳಬಾರದು. ಯಾಕಂದರೆ ಯಾರು ಚೆನ್ನಾಗಿ ವಿಚಾರಿಸಿ ತಿಳಿದುಕೊಳ್ಳದೆ ಯಾವ ಕೆಲಸವನ್ನಾದರೂ ಮಾಡಿದರೆ ಅವರಿಗೆ ಅಂತ್ಯದಲ್ಲಿ ಕೈತಿಕ್ಕಿ ಕುಳಿತು ಪಶ್ಚಾತ್ತಾಪಪಡಬೇಕಾಗುತ್ತದೆ" ಎಂದು ಯೋಚಿಸಿದನು.

ಮತ್ತೆ ಆ ಕನ್ಯೆಯ ಕಡೆಗೆ ಬಹಳ ನಮ್ರದೃಷ್ಟಿಯಿಂದ ನೋಡಿ ಶಕ್ತಿಕುಮಾರನು ಹೇಳುತ್ತಾನೆ:—"ಕಲ್ಯಾಣಿ! ನನ್ನಲ್ಲಿ ಈ ಧಾನ್ಯವಿದೆ. ಇಷ್ಟರಿಂದಲೇ ನೀನು ನನಗೆ ಒಳ್ಳೇ ರೀತಿಯಲ್ಲಿ ಭೋಜನಮಾಡಿಸುವೆಯಾ?"

ಅವನ ಮಾತನ್ನು ಕೇಳಿ ಆ ಕನ್ಯೆಯು ವೃದ್ಧೆಯಾದ ದಾಸಿಗೆ ಸಂಜ್ಞೆಮಾಡಿದಳು. ದಾಸಿಯು ಸೆಟ್ಟಿಯಿಂದ ಧಾನ್ಯವನ್ನು ತೆಗದುಕೊಂಡು ಹೊರಗಡೆ ಹೆಬ್ಬಾಗಲಲ್ಲಿ ನಿರ್ಮಲವಾದೊಂದುಕಡೆ ಆತನನ್ನು ಕುಳ್ಳಿರಿಸಿ ಕೈಕಾಲು ತೊಳೆದುಕೊಳ್ಳಲು ಒಂದು ತಂಬಿಗೆ ನೀರನ್ನು ಇಟ್ಟಳು.

ಕನ್ಯೆಯು ಮೊದಲು ಧಾನ್ಯವನ್ನು ಬಿಸಿಲಲ್ಲಿ ಹಾಕಿ ಒಣಗಿಸಿಕೊಂಡು ಮತ್ತೆ ಅದನ್ನು ಆರಿಸಿ ಒನಿಕೆಯಿಂದ ಕುಟ್ಟಿ ಅಕ್ಕಿ ತೆಗದುಕೊಂಡು ಅಕ್ಕಿಯ ಹೊಟ್ಟನ್ನು (ತುಷಾ) ದಾಸಿಯು ಕ್ಯೆಯಲ್ಲಿ ಕೊಟ್ಟು "ಅಕ್ಕಸಾಲಿಗರು ಧಾನ್ಯದ ಹೊಟ್ಟನಿಂದ ಆಭರಣಗಳನ್ನು ಸ್ವಚ್ಛಮಾಡುತ್ತಾರೆ. ನೀನು ಇದನ್ನು ಯಾವ ಅಕ್ಕಸಾಲಿಗನಿಗಾದರೂ ಮಾರಿ ಸಿಕ್ಕಿದ ಕಾಸಿನಿಂದ ತುಂಬಾ ಒಣಗಿದ್ದೂ ಅಲ್ಲ ತುಂಬಾ ಹಸಿಯೂ ಅಲ್ಲ ಅಂಥಾ ಕಟ್ಟಿಗೆ, ಒಂದು ಸಣ್ಣ ಮಡಕೆ, ಎರಡು ಬಾವಡೆಗಳನ್ನು ತೆಗದುಕೊಂಡು ಬಾ" ಎಂದು ಹೇಳಿ ಕಳುಹಿಸಿದಳು. ದಾಸಿಯು ಹಾಗೆಯೇ ಮಾಡಿದಳು. ಆಗ ಕನ್ಯೆಯು ಆ ಅಕ್ಕಿಯನ್ನು ಪುನಃ ಒಂದು ಸಲ ಕುಟ್ಟಿ ಸರಿಮಾಡಿ ಅದನ್ನು ಮೊರದಲ್ಲಿಟ್ಟು ಕೇರಿ ನುಚ್ಚಕ್ಕಿಯನ್ನೂ ಧಾನ್ಯದ ತೌಡನ್ನೂ ತೆಗದಳು. ಆ ಮೇಲೆ ಮೊದಲು ಒಲೆ ಹತ್ತಿಸಿ ಅಗ್ನಿದೇವನನ್ನು ಪೂಜಿಸಿದಳು. ಅಕ್ಕಿಯ ಒಂದು ಚಿಟಿಕಿಯನ್ನು ಬೆಂಕಿಯಲ್ಲಿ ಹಾಕಿ ಅಗ್ನಿಪೂಜೆಯನ್ನು ಮಾಡಿ ಕ್ಯೆಜೋಡಿಸಿಕೊಂಡು ಅಗ್ನಿನಾರಾಯಣನೇ! ಅಡಿಗೆಯ ಕೆಲಸದಲ್ಲಿ ನನಗೆ ಎಲ್ಲಾ ತರದಲ್ಲಿಯೂ ಸುಮಂಗಲವನ್ನುಂಟುಮಾಡೆಂದು ಪ್ರಾರ್ಥಿಸಿಕೊಂಡು, ಎಷ್ಟು ಅಕ್ಕಿಯಿತ್ತೋ ಅದಕ್ಕೆ ಐದರಷ್ಟು ನೀರಿಟ್ಟು ಅಕ್ಕಿ ತೊಳೆದು ಅದರಲ್ಲಿ ಸುರಿದಳು. ನೀರು ತುಂಬಾ ಮರಳುತ್ತಿದ್ದು ಅಕ್ಕಿಯು ಯಾವಾಗ ಬೆಂದಿತೋ ಆಗ ಕನ್ಯೆಯು ಸಟ್ಟುಗದಿಂದ ತೆಗದು, ಎಲ್ಲಿಯಾದರೂ ಹಸಿಯಾಗಿ ಉಳಿದಿಲ್ಲವಲ್ಲ ಎಂದು ಮುಟ್ಟಿ ನೋಡಿದಳು. ಸರಿಯಾಗಿದ್ದದ್ದನ್ನು ತಿಳಿದು ಆ ಮೇಲೆ ಬೆಂಕಿಯನ್ನು ಕಡಿಮೆಮಾಡಿ ಒಂದು ಬಾವಡೆಯನ್ನು ಅದಕ್ಕೆ ಮುಚ್ಚಿ ಒಂದು ಬಾವಡೆಗೆ ಅದರ ಗಂಜಿಯನ್ನು ಮೆಲ್ಲನೆ ಬಗ್ಗಿಸಿಕೊಂಡಳು.

ಚೆನ್ನಾಗಿ ಉರಿಯದ ಕಟ್ಟಿಗೆಯನ್ನು ನೀರಿನಿಂದ ಆರಿಸಿಕೊಂಡು ಬೇರೆ ಇಟ್ಟು ಉರಿದುಹೋದ ಕಟ್ಟಿಗೆಯನ್ನು ಕರಿ (ಇದ್ದಲು) ಮಾಡಿದಳು. ಆಗ ಅಕ್ಕಿಯಿಂದ ಬಂದ ನುಚ್ಚನ್ನೂ ಕರಿಯನ್ನೂ ದಾಸಿಯು ಕ್ಯೆಯಲ್ಲಿ ಕೊಟ್ಟು "ಈ ಕರಿ, ನುಚ್ಚು, ತೌಡು ಇವುಗಳನ್ನು ಮಾರಿ ಬಂದ ಕಾಸಿಗೆ ಆದರಿಂದ ಸ್ವಲ್ಪ ಹರಿವೇಸಪ್ಪು, ಸ್ವಲ್ಪ ತುಪ್ಪ, ಉಪ್ಪು, ಎಣ್ಣೆ, ಮೊಸರು,

ನೆಲ್ಲಿಕಾಯಿ ಮತ್ತು ಹುಣಸೇಹಣ್ಣು ತೆಗೆದುಕೊಂಡು ಬಾ'' ಎಂದಳು. ದಾಸಿಯು ಎಲ್ಲವನ್ನು ಸರಿಯಾಗಿ ಹಾಗೆಯೇ ಮಾಡಿದಳು.

ಆಗ ಕನ್ಯೆಯು ಆ ಹರಿವೇಸೊಪ್ಪಿನಿಂದಲೇ ಎರಡು ಮೂರು ತರದ ಮೇಲೋಗರವನ್ನು ಮಾಡಿದಳು. ಮತ್ತು ಒಡ್ಡೆಯಾದ ಮರಳಿನಲ್ಲಿ ಒಂದು ಬಾವಡೆಯನ್ನು ಇಟ್ಟು ಅದರಲ್ಲಿ ಅನ್ನದ ಗಂಜಿಯನ್ನು ಹಾಕಿ ಬೀಸಣಿಗೆಯಿಂದ ಬೀಸಿ ಅದಕ್ಕೆ ಉಪ್ಪು ಹುಳಿ ಹಾಕಿ ಒಂದು ತರದ ಸ್ವಾದಿಷ್ಟವಾದ ಪೇಯವನ್ನು ಮಾಡಿದಳು. ಈ ಪ್ರಕಾರದ ಪೇಯವು ಅಗ್ನಿದೀಪಕ, ವಾತನಾಶಕ ಮತ್ತು ಹಸಿವು, ತೃಷೆ, ಗ್ಲಾನಿ, ದುರ್ಬಲತೆ, ಪೇಯದರೋಗ ಇವೇ ಮೊದಲಾದವುಗಳನ್ನು ದೂರಮಾಡುವುದಾಗಿರುತ್ತದೆ. ಹೀಗೆಯೇ ವೈದ್ಯಶಾಸ್ತ್ರದಲ್ಲಿ ಸಹ ಕಾಣಬರುತ್ತದೆ. ಆ ಮೇಲೆ ಕನ್ಯೆಯು ನೆಲ್ಲಿಕಾಯನ್ನು ಅರೆದು ಒಂದು ತಟ್ಟೆಯಲ್ಲಿಟ್ಟು ಎಣ್ಣೆ ಮತ್ತು ಅರೆದ ನೆಲ್ಲಿಕಾಯನ್ನು ದಾಸಿಯ ಕೈಯಲ್ಲಿ ಕೊಟ್ಟು "ಸೆಟ್ಟೆಯವರನ್ನು ಸ್ನಾನಮಾಡಿ ಬರಹೇಳು'' ಎಂದು ಹೇಳಿ ಕಳುಹಿಸಿದಳು.

ಶಕ್ತಿಕುಮಾರನು ಎಣ್ಣೆ ಮತ್ತು ನೆಲ್ಲಿಯಿಂದ ಚೆನ್ನಾಗಿ ಸ್ನಾನ ಮಾಡಿಕೊಂಡು ಶುದ್ಧವಾದ ಬಟ್ಟೆಯನ್ನುಟ್ಟುಕೊಂಡು, ಶುದ್ಧಶರೀರ ಶುದ್ಧ ಚಿತ್ತನಾಗಿ ಪೂಜಾಪಾರಾಯಣಾದಿಗಳಿಂದ ನಿಶ್ಚಿಂತನಾಗಿ ಬಂದು ಮಣೆಯಲ್ಲಿ ಕುಳಿತನು. ಅಲ್ಲಿಯೇ ಅಂಗಳದಲ್ಲಿ ಸ್ವಲ್ಪ ಬಾಳೇಮರಗಳಿದ್ದವು. ಕನ್ಯೆಯು ಅದರಿಂದ ಒಂದು ಎಲೆಯನ್ನು ಕ್ಕೊಯ್ದುಕೊಂಡು ತೊಳೆದು ಶಕ್ತಿಕುಮಾರನ ಮುಂದೆ ಇಟ್ಟು ಅದರ ಮೇಲೆ ನೀರಿನಿಂದ ತೊಳೆದ ಒಂದು ಬಾವಡೆಯನ್ನಿಟ್ಟು ಮೊದಲು ಆ ಪೇಯವನ್ನು ಬಡಿಸಿದಳು. ಅದನ್ನು ಕುಡಿದ ಕೂಡಲೇ ಕುಮಾರನ ಶರೀರದ ಆಯಾಸಗಳೆಲ್ಲಾ ಪರಿಹಾರವಾಗಿ ಚಿತ್ತವು ಆನಂದಿತವಾಗಿ ಶರೀರದಲ್ಲಿ ಒಂದು ಬಗೆಯ (ಸ್ಫೂರ್ತಿ) ಬಲ ಪ್ರಕಾಶ ಉಂಟಾಯಿತು. ಆ ಮೇಲೆ ಕನ್ಯೆಯು ಎರಡು ಸಟ್ಟುಗ ಅನ್ನವನ್ನೂ ಸ್ವಲ್ಪ ತುಪ್ಪವನ್ನೂ ಮತ್ತು ರಸರಸವಾದ ಸಪ್ಪಿನ ಮೇಲೋಗರವನ್ನೂ ಬಡಿಸಿದಳು. ಮತ್ತೆ ಅನ್ನ, ಪಲ್ಯ, ಚಟ್ನಿ ಮೊದಲಾದವನ್ನು ಕ್ರಮದಿಂದ ಬಡಿಸಿ, ಕಡೆಗೆ ಉಳಿದ ಅನ್ನವನ್ನು ಮೊಸರನ್ನಕ್ಕೆ

ಹಾಕಿದಳು. ಎಲೆಯಲ್ಲಿ ಸ್ವಲ್ಪ ಅನ್ನವು ಉಳಿದಾಗಲೇ ಕುಮಾರನು "ನನಗೆ ಪೂರ್ಣ ತೃಪ್ತಿಯಾಯಿತು. ಇನ್ನು ಕುಡಿಯಲು ನೀರು ತಾ" ಎಂದು ಹೇಳಿದನು.

ಆಗ ಕನ್ಯೆಯು ಸ್ವಚ್ಛವಾದ ಹೊಸಮಡಿಕೆಯಲ್ಲಿ ತುಂಬಿಟ್ಟಿದ್ದ ನಿರ್ಮಲವಾದ ಮತ್ತು ಶೀತಲವಾದ ನೀರನ್ನು ಮೆಲ್ಲಮೆಲ್ಲನೆ ಬಾವಡೆಯಲ್ಲಿ ಹಾಕಿದಳು. ಕುಮಾರನು ನೀರು ಕುಡಿದು ಎದ್ದನು. ಆಗ ಕನ್ಯೆಯು ಕೈತೊಳೆಯಲಿಕ್ಕೆ ನೀರನ್ನು ಕೊಟ್ಟು ಆಚಮನೆಗೋಸ್ಕರ ಸ್ವಚ್ಛವಾದ ಒಂದು ಪಂಚಪಾತ್ರೆಯಲ್ಲಿ ನೀರನ್ನು ಇಟ್ಟಳು. ದಾಸಿಯು ಬೇಗನೇ ಎಂಜಲು ಗೋಮಯಮಾಡಿ ಹೊರಗಡೆ ಹೆಬ್ಬಾಗಲಿನಲ್ಲಿ ಕುಮಾರನಿಗೆ ಮಲಗಲೋಸುಗ ಒಂದು ಸ್ವಚ್ಛವಾದ ಶಯ್ಯೆಯನ್ನು ಬಿಡಿಸಿದಳು. ಕುಮಾರನು ಸ್ವಲ್ಪ ಹೊತ್ತು ಅದರಲ್ಲಿ ಮಲಗಿ ವಿಶ್ರಮಿಸಿದನು. ಆ ಮೇಲೆ ಅವನು ಆ ಕನ್ಯಾಪಿತನೊಂದಿಗೆ ತನ್ನ ಪೂರ್ಣ ಪರಿಚಯವನ್ನು ಕೊಟ್ಟು ವಿವಾಹದ ಮಾತನ್ನು ಎತ್ತಿದನು. ಮತ್ತು ಅದೇ ಕನ್ಯೆಯನ್ನು ವಿಧಿ ಪೂರ್ವಕವಾಗಿ ವಿವಾಹಮಾಡಿಕೊಂಡು ಅವಳನ್ನು ಕರೆದುಕೊಂಡು ತನ್ನ ಮನೆಗೆ ಹಿಂದಿರುಗಿದನು.

ಆ ಕನ್ಯೆಯು ಆಲಸ್ಯವನ್ನು ತ್ಯಜಿಸಿ ಪತಿಸೇವೆ ಮತ್ತು ಪರಿಜನರ ಪರಿಚರ್ಯೆಯನ್ನು ಮಾಡುವುದರಲ್ಲಿ ತೊಡಗಿದಳು. ಎಲ್ಲಾ ಗೃಹ ಕಾರ್ಯಗಳನ್ನು ಸುವ್ಯವಸ್ಥೆಯಿಂದ ಮಾಡುತ್ತಿದ್ದಳು. ಅವಳು ದಯಾ ಮುಂತಾದ ಗುಣಗಳ ಆಧಾರಳಾಗಿ ಎಲ್ಲರನ್ನೂ ತನ್ನ ವಶೀಭೂತರ ನ್ನಾಗಿ ಮಾಡಿಕೊಂಡಳು. ಅವಳ ಪತಿಯು ಅವಳ ಗುಣದಿಂದ ವಶೀ ಭೂತನಾಗಿ ತನ್ನ ಎಲ್ಲಾ ಪರಿವಾರದವರನ್ನು ಅವಳ ಅಧೀನರನ್ನಾಗಿ ಮಾಡಿ ತಾನು ಪವಿತ್ರಭಾವದಿಂದ ಧರ್ಮ, ಅರ್ಥ, ಕಾಮಗಳ ಉಪಭೋ ಗಮಾಡಿಕೊಂಡು ಮೋಕ್ಷಲಾಭದ ಪ್ರಯತ್ನವನ್ನು ಸಾಧಿಸತೊಡಗಿದನು.

ಆ ಕನ್ಯೆಯ ಹೆಸರು ಗೋಮಿನೀ ಎಂದು. ಅವಳ ಕಥೆಯು ದಶಕುಮಾರಚರಿತ್ರೆಯಲ್ಲಿ ಸವಿಸ್ತಾರವಾಗಿ ಬರೆಯಲ್ಪಟ್ಟಿದೆ.

# ಸತಿಪತಿಯರ ಜಗಳ.

ಉಪನ್ಯಾಸ, ಕಥೆ, ಪುರಾಣ ಮುಂತಾದವುಗಳನ್ನು ಓದುವುದರಿಂದ ಪೂರ್ಣ ಶಿಕ್ಷಣವೇನೋ ದೊರೆಯುವುದು. ಅದರಲ್ಲೇನೂ ಸಂದೇಹ ವಿಲ್ಲ. ಆದರೆ ಇಂಥಾ ಪುಸ್ತಕಗಳನ್ನೋದುವಾಗ ಬಹಳವಾಗಿ ನಾನು ಆಲೋಚಿಸುತ್ತಿದ್ದೇನೆಂದರೆ—ಈ ಪುಸ್ತಕಗಳಲ್ಲಿ ರೋಗಾದಿ ದುಃಖಗಳ ವರ್ಣನೆಯ ಎರಡು ಮಾತುಗಳು ಇದ್ದಿದ್ದರೆ ನಮಗೆಲ್ಲಾ ಎಷ್ಟು ಲಾಭ ವಾಗುತ್ತಿತ್ತು! ಕಾವ್ಯ, ಉಪನ್ಯಾಸಗಳ ನಾಯಕ, ನಾಯಕಿಯರೂ ಮತ್ತು ಈ ಗ್ರಂಥಗಳ ಸಣ್ಣಸಣ್ಣ ಪಾತ್ರಗಳೂ ಕೂಡ ತಮ್ಮ ಜನ್ಮ ದಲ್ಲೆಲ್ಲಾ ನೀರೋಗಿಗಳಾಗಿಯೇ ಇದ್ದರೆಂದು ತಿಳಿದುಬರುತ್ತದೆ. ಯಾವ ದೇಶದ ಯಾವ ಕಾವ್ಯದಲ್ಲಾದರೂ ಹರಳೆಣ್ಣೆಯನ್ನು ಕುಡಿಯುವ ವಿಷಯವಾದ ಮಾತನ್ನು ಇದುವರೆಗೂ ನಾನು ನೋಡಿಲ್ಲ. ಆದರೆ ನಿಜವಾಗಿ ನೋಡಿದರೆ ಪೃಥ್ವಿಯಲ್ಲಿ ಎಷ್ಟು ಜನರು ರೋಗವೆಂಬ ಆ ನರಕಯಾತನೆಯನ್ನು ಅನುಭವಿಸಲಿಕ್ಕಿಲ್ಲ! ಇಂಥಾ ಕಾರಣಗಳಿಂದ ಕಾವ್ಯದಲ್ಲಿ ವರ್ಣಿತರಾದ ಮನುಷ್ಯರಿಗೂ ಬೇರೆಯವರಿಗೂ ಎಷ್ಟೋ ಭೇದಗಳು ತಿಳಿಯುತ್ತವೆ. ಆ ದೆಶೆಯು ಗ್ರಂಥಲೇಖಕರ ಮನಸ್ಸಿನಲ್ಲಿ ನಟ್ಟಿರುವ ವಸ್ತುಗಳಂತೆ ಪ್ರತೀತವಾಗುತ್ತದೆ. ಮತ್ತು ನಮ್ಮ ಎಲ್ಲಾ ಕೆಲಸಗಳಿಗೋಸ್ಕರ ಅವರ ದೃಷ್ಟಾಂತವು ದುರ್ಬಲವಾಗಿ ಕಾಣುತ್ತದೆ.

ಗೃಹಸ್ಥಾಶ್ರಮದ ವಿಷಯದಲ್ಲಿ ಅಂಥಾ, ಮನಸ್ಸಿನಲ್ಲಿ ನಡುವ ಮಾತುಗಳನ್ನು ವರ್ಣಿಸುವುದು ನನ್ನ ಉದ್ದೇಶವಲ್ಲ. ಆದುದರಿಂದ ಈ ನಿಬಂಧನೆಯಲ್ಲಿ ಗೃಹಸ್ಥಾಶ್ರಮದ ಒಂದು ಸಾಧಾರಣ ದುಃಖದಾಯಕ ವಾದ ಸಂದರ್ಭವನ್ನು ವರ್ಣಿಸುತ್ತೇನೆ. ಹಲವು ಮಂದಿ ಪತಿ-ಪತ್ನಿಯ ರಲ್ಲಿ ಜಗಳಗಳಾಗುತ್ತಿರುತ್ತವೆ. ಅವರಿಬ್ಬರಿಗೂ ಆ ಜಗಳವು ಬಹಳ ದುಃಖದಾಯಕವಾಗಿರುತ್ತದೆ. ಎಷ್ಟೋ ದುಃಖವಾಗಿದ್ದರೂ ಜಗಳಗಳಾ ಗದೇ ಇರುವುದು ಅಸಂಭವವು. ನಿಜವಾಗಿ ನೋಡಿದರೆ ಇದು ಒಂದು ಸಾಧಾರಣವಾದ ಮಾತೇ ಆಗಿದೆ. ಪತಿ-ಪತ್ನಿಯರಿಗೆ ಜಗಳವು ಬೇಗನೇ

ಆಗುವುದೆಂದು ನಾನು ನೆನಸುತ್ತೇನೆ. ಯಾರಲ್ಲಿ ತಮ್ಮೊಳಗೆ ಬಹಳ ಅತಿರೇಕವಾದ ಪ್ರೇಮವಿರುತ್ತದೋ, ಅವರಲ್ಲಿ ಜಗಳವಾಗದೆ ಕೆಲಸ ನಡಿಯುವುದೇ ಇಲ್ಲ. ಇದರ ಕಾರಣವೇನು? ಇದರ ಕಾರಣವು ಅಪ್ರೇಮ ಮತ್ತು ಪ್ರೇಮದ ಅತಿರೇಕವೇ.

ಪರಸ್ಪರ ಪ್ರೀತಿ ಇಡುವ ದಂಪತಿಗಳು ಸರ್ವವಿಧದಲ್ಲಿಯೂ ತಮ್ಮ ಹೃದಯವನ್ನು ಜೋಡಾಗಿ ಇಡಲು ಇಚ್ಛಿಸುತ್ತಾರೆ. ಆದರೆ ಈ ಸಂಸಾರದಲ್ಲಿ ಲಕ್ಷ ಪ್ರಯತ್ನಗಳಿಂದ ಹೃದಯವನ್ನು ಜೋಡಿಸಿದರೂ ಕೂಡ ಆ ಜೋಡಿನ ಜಾಗದಲ್ಲಿ ಗೆರೆಯು ಕಾಣಬರುತ್ತದೆ. ಮತ್ತು ಜೋಡು ಎಷ್ಟುಮಾತ್ರಕ್ಕೂ ಒಂದಾಗುವುದಿಲ್ಲ. ಇದರಿಂದಲೇ ಜಗಳದ ಬೀಜವು ಬಿತ್ತಲ್ಪಡುತ್ತದೆ. ಈ ವಿಷಯದಲ್ಲಿ ನನ್ನ ಮತವು ಹೀಗಿದೆ. ಆದರೆ ಅವನ ಮತವು ಈ ವಿಷಯದಲ್ಲಿ ಬೇರೆಯೇ. ಹಾಗಾದರೆ ಎರಡನೇ ಯಾವ ಕೆಲಸದಲ್ಲಿಯೂ ನಮ್ಮ ಮತವು ಒಂದಾಗಲಾರದು. ಯಾವಾಗ ನಮ್ಮ ಮತವು ಎಲ್ಲಾ ಕೆಲಸಗಳಲ್ಲಿಯೂ ಒಂದಾಗಲಾರದೋ, ಆಗ ನಮ್ಮ ಮನಸ್ಸಿನ ಗತಿ(ನಡತೆ)ಯೇ ಬೇರೆಂದು ಗೊತ್ತಾಗುತ್ತದೆ. ಮತ್ತೆ ಪ್ರೀತಿ ಹ್ಯಾಗಿದ್ದೀತು? ಪ್ರೀತಿಯೇ ಯಾವಾಗ ಇರುವುದಿಲ್ಲವೋ, ಆಗ ಬದುಕಿ ಫಲವೇನು? ದಂಪತಿಯರ ಜಗಳದೊಳಗೆ ಇದೇ ರೀತಿಯ ಒಂದು ಅಪೂರ್ವವಾದ ವಿಚಾರಪ್ರವಾಹವು ಹಗಲಿರುಳೂ ಪ್ರವಹಿಸುತ್ತಿರುತ್ತದೆ. ಈ ವಿಚಾರರೂಪೀ ಪ್ರವಾಹಕ್ಕೆ ಕಲ್ಪನಾರೂಪದ ವಾಯುವಿನ ಹೊಡೆತದಿಂದ ಎಷ್ಟು ದುಷ್ಟ ಮತ್ತು ಗೂಢವಾದ ತಿಳುವಳಿಕೆಯ ವಿಚಿತ್ರ ಲಹರಿಗಳೇಳಲಾರಂಭಿಸುತ್ತವೆಂದರೆ, ಅದನ್ನು ನೋಡುವವರಿಗೆ ಬಹಳ ತಮಾಷೆಯಂತಾಗುತ್ತದೆ. ಜಗಳವಾಡುವುದು ದಂಪತಿಗಳು, ತಮಾಷೆ ನೋಡುವುದು ಎರಡನೇಯವರು. ನೋಡುವವರಿಗೆ ಈ ಜಗಳದಿಂದ ಎಷ್ಟು ಆನಂದವಾಗುತ್ತದೆಂದರೆ ಕೆಲವು ಸಲ ಅವರು ತಮಾಷೆ ನೋಡುವುದಕ್ಕೋಸ್ಕರ ಈ ಜಗಳವನ್ನು ಎಬ್ಬಿಸುತ್ತಾರೆ. ಆದರೆ ಉಪಹಾಸಮಾಡಲಿಕ್ಕೆ ಎರಡನೇಯವರಿಗೆ ಎಷ್ಟೇ ಅವಸರ ಸಿಕ್ಕಿದರೂ ದಂಪತಿಯರ ಜಗಳವು ತಮಗೋಸ್ಕರ ಬಹಳ ದುಃಖದಾಯಕವಾಗುತ್ತದೆ. ಎಷ್ಟರ ವರೆಗೆ ಜಗಳವು

ನಡಿಯುತ್ತಿರುತ್ತದೋ ಆಗ ಇಬ್ಬರೂ ಮನಸ್ಸಿನಲ್ಲಿ ತಮ್ಮನ್ನು ಎಷ್ಟು ಹೀನರಾಗಿ ಎಣಿಸುತ್ತಾರೆಂದರೆ ಕುತ್ತಿಗೆಗೆ ನೇಣುಹಾಕಿಕೊಂಡು ಸಾಯಲೆಣಿಸುತ್ತಾರೆ. ಆದರೂ ಪತಿ-ಪತ್ನಿಯರ ಜಗಳವು ಸ್ವಲ್ಪ ಹೊತ್ತೇ ಇರುವುದೆಂಬದು ಬಹಳ ಕುಶಲದ ಮಾತು. ಈಗಿನ ಬಣ್ಣದ ಬೆಂಕಿಪೆಟ್ಟಿಗೆಯಂತೆ ಜಗಳವು ಫಕ್ಕನೇ ಉರಿದೇಳುತ್ತದೆ. ನಾಲ್ಕೂ ಕಡೆಯು ಕೆಂಪು ಕೆಂಪಾದ ಪ್ರಕಾಶವನ್ನು ಹರಡುತ್ತದೆ. ಮತ್ತು ಮಾತಿಗೆ ಮಾತಾಗುವಾಗಲೇ ಬೆಂಕಿಕಡ್ಡಿಯು ಆರಿಹೋಗುತ್ತದೆ. ಎಲ್ಲಾ ಕಡೆಯೂ ಕತ್ತಲು ಕವಿಯುತ್ತದೆ.

ಅಜಾಯುದ್ಧಂ ಋಷಿಶ್ರಾದ್ಧಂ ಪ್ರಭಾತೇ ಮೇಘಡಂಬರಃ |
ದಂಪತ್ಯೋಃ ಕಲಹಶ್ಚೈವ ಪರಿಣಾಮೇ ನ ಕಿಂಚನ ||

ಸೃಷ್ಟಿಯನ್ನು ನಾಶಮಾಡುವ ಮಿಂಚಿನ ಬೆಂಕಿಯು ಮಾತಿಗೆ ಮಾತಿನಲ್ಲೇ ಆರಿಹೋಗುತ್ತದೆ. ಒಂದು ವೇಳೆ ಆ ಬೆಂಕಿಯು ಸ್ವಲ್ಪಹೊತ್ತಿನವರೆಗೆ ಇದ್ದುಬಿಟ್ಟರೆ ಪ್ರಲಯವಾಗಿಹೋಗುವುದು.

ನನ್ನ ತಿಳುವಳಿಕೆಯಲ್ಲಿ ಈ ಬೆಂಕಿಯು ಉರಿದೇಳುವುದರಿಂದ ಯಾವ ಹಾನಿಯೂ ಇಲ್ಲ. ಹತ್ತಿರಹತ್ತಿರವಿರುವ ಎರಡು ಮೇಘಗಳಲ್ಲಿ ಮಿಂಚಿನ ಸ್ವಲ್ಪಸ್ವಲ್ಪ ಅಂಶಗಳಿರುವುದರಿಂದ ಮಿಂಚಿನ ಬೆಂಕಿಯು ಹೇಗೆ ಹೊಳೆಯುವುದೋ, ಮತ್ತೂ ಹೊಳೆಯುತ್ತಾ ಆ ಎರಡು ಮೇಘಗಳು ಮಿಂಚನ್ನು ಸರಿಸಮಾನವಾಗಿ ಮಾಡುತ್ತವೆಯೋ, ಅದೇ ರೀತಿ ಸ್ತ್ರೀ ಮತ್ತು ಪುರುಷರಲ್ಲಿ ಮತಗಳ ಅನೈಕ್ಯವು ಇರುವ ಕಾರಣ ಕಲಹದ ಬೆಂಕಿಯು ಉರಿದೇಳುತ್ತದೆ. ಆದರೆ ಅದು ಅವರಿಬ್ಬರ ಮತಗಳನ್ನೂ ಇಬ್ಬರ ಮನಸ್ಸನ್ನೂ ಒಂದಾಗಿ ಮಾಡುತ್ತದೆ. ನಿನ್ನಲ್ಲಿ ಮತ್ತು ನನ್ನಲ್ಲಿ ಇದುವರೆಗೂ ಮನಸ್ಸಿನ ಕೂಡುವಿಕೆಯು ಏಕೆ ಇರುವುದಿಲ್ಲ? ನಮ್ಮಿಬ್ಬರ ಮನಸ್ಸು ಇದುವರೆಗೂ ಯಾಕೆ ಒಂದಾಗಲಿಲ್ಲ? ಒಂದೇ ಮನಸ್ಸು, ಒಂದೇ ಮತ, ಒಂದೇ ಆತ್ಮ ಇವುಗಳನ್ನು ಇಬ್ಬರೂ ಒಂದಾಗಿ ಮಾಡಿಕೊಳ್ಳಬೇಕು. ಇದೇ ಭಾವನೆಯು ದಂಪತಿಗಳ ಕಲಹದೊಳಗೆ ಅಡಗಿಕೊಂಡಿರುತ್ತದೆ. ಈ ದಂಪತಿಯರ ಜಗಳವು ಅವರ ಪ್ರೇಮದ

ಪರಿಚಯವನ್ನು ಮಾಡಿಸಿಕೊಡುತ್ತದೆ. ಅಲ್ಲದೆ ಅವರ ಪ್ರೇಮದ ಬಂಧ ನವನ್ನು ಮತ್ತಷ್ಟು ದೃಢೀಕರಿಸುತ್ತದೆ. ಆದಕಾರಣ ಪತಿ-ಸತಿಯರ ಜಗಳವಾದಾಗ ಬಹಳವಾಗಿ ಯಾರಿಂದಲೂ ಸುಮ್ಮನಿರುವುದಾಗುವುದಿಲ್ಲ. ಎಷ್ಟರ ವರೆಗೆ ಜಗಳವಾಗುತ್ತಿರುತ್ತದೋ, ಅಷ್ಟರ ವರೆಗೆ ವಾಕ್ಯಬಾಣಗಳ ಮಳೆಯೇ ಸುರಿಯುತ್ತಿರುತ್ತದೆ. ಇಂಥಾ ಸಮಯದಲ್ಲಿ ಒಂದು ವೇಳೆ ಇಬ್ಬರು ಸುಮ್ಮಗಿದ್ದರೂ, ಅಥವಾ ಎದ್ದು ಎರಡನೇ ಸ್ಥಳಕ್ಕೆ ಹೋಗಿಬಿಟ್ಟರೂ ಸಹ ಎರಡನೇಯವನ ಕ್ರೋಧವು ಶಾಂತವಾಗದೆ ಮತ್ತು ನೂರು ಪಾಲು ಹೆಚ್ಚಾಗುತ್ತದೆ. ಒಂದು ವೇಳೆ ನಾನು ಈಗ ನಿಮ್ಮ ಮಾತಿಗೆ ಜವಾಬು ಕೊಡುವುದಿಲ್ಲ. ಇಲ್ಲದಿದ್ದರೆ ದೊಡ್ಡವರು (ಗುರುಜನರು) ಕೇಳಿಯಾರು ಎಂದು ಹೇಳಿ ಅಲ್ಲಿಂದೆದ್ದುಹೋದರೆ ಏನೂ ಹಾನಿಯಿಲ್ಲ. ಆದರೆ ಮತ್ತೆ ಪುನಃ ಅದೇ ಮಾತು ಬಂದರೆ ಅದನ್ನು ಪೂರೈಸದೆ ಬಿಡುವುದು ಒಳ್ಳೇದಲ್ಲ. ಮೊದಲನೇ ಮಾತನ್ನು ಪುನಃ ಯಾರು ಎತ್ತಿ ರೋಷಿಯಾಗುತ್ತಾರೋ, ಅವರಿಗೆ ಮತ್ತೆ ನಾಚಿಕೆಯಾಗಲು ಆರಂಭವಾಗುತ್ತದೆ. ನಾಚಿಕೆಯು ತೋರಿಬಂದರೆ ಮತ್ತೆ ಮಾತು ಹೆಚ್ಚಿಸಬಾರದು. ಜಗಳವಾಡುವವರಿಬ್ಬರಲ್ಲಿ ಯಾರು ಸುಮ್ಮನಿದ್ದು ಎದ್ದುಹೋದರೂ ಎರಡನೇಯವನ ತಿಳುವಳಿಕೆಗೆ ಅವಳು ತನ್ನ ಮನಸ್ಸಿನ ಬಾಗಲನ್ನು ಹಾಕಿಕೊಂಡಳೆಂದೂ, ಅವಳು ಎರಡು ಮನಸ್ಸನ್ನೂ ಒಂದು ಮಾಡಲು ಉಚಿತವಾದ ಯತ್ನವನ್ನು ಮಾಡಲಿಲ್ಲವೆಂದೂ, ಅವಳು ಮನಸ್ಸು ಬಂದಂತೆ ಆಚರಿಸುತ್ತಾಳೆಂದೂ, ಸ್ವಾರ್ಥೀ ಎಂದೂ, ನಿಷ್ಠುರಳೆಂದೂ, ಅವಳ ಮನಸ್ಸಿನಲ್ಲಿ ನಿಜವಾದ ಪ್ರೇಮವಿಲ್ಲವೆಂದೂ ತಿಳಿದುಬರುತ್ತದೆ.

ಇದೇ ಕಾರಣದಿಂದ ಎರಡನೇ(ಬೇರೆ)ಯವರ ಜಗಳದಲ್ಲಿ ಒಬ್ಬನ ಮೌನಧಾರಣೆಯಿಂದ ಒಳ್ಳೇದೆಂದು ಎಣಿಸಲ್ಪಡುತ್ತದೆ. ಯಾಕಂದರೆ— ಅದರಿಂದ ಜಗಳವು ನಿಂತುಹೋಗಲು ಆರಂಭವಾಗುತ್ತದೆ. ಆದರೆ ಅದೇ ದಂಪತಿಯರ ಜಗಳದಲ್ಲಿ ಮೌನಸಾಧನೆಯು ಒಳ್ಳೇದಾಗುವುದಿಲ್ಲ. ಅದರಿಂದ ಕಲಹಾಗ್ನಿಯು ಮತ್ತೂ ಉರಿದೇಳುತ್ತದೆ. ಅಥವಾ ಮೇಲಿನಿಂದ ಆರಿದಂತೆ ಕಂಡುಬಂದರೂ, ಒಳಹೊಕ್ಕು ಹೃದಯವನ್ನು ಸುಟ್ಟು ಭಸ್ಮವ

ನ್ನಾಗಿ ಮಾಡಿಬಿಡುತ್ತದೆ. ಬೇರೆಯವರ ಜಗಳದಲ್ಲಿ ಒಂದು ಪಕ್ಷದವರು ಆ ಸ್ಥಳ ಬಿಟ್ಟು ಎದ್ದುಹೋಗುವುದು ಒಳ್ಳೇದಾಗುತ್ತದೆ. ಆದರೆ ದಂಪತಿಗಳ ಜಗಳದಲ್ಲಿ ಯಾರಾದರೂ ಎದ್ದುಹೋದರೆ ಮಹಾ ಅವಮಾನ ಮಾಡಿದ್ದಾಗಿ ತಿಳಿಯಲ್ಪಡುತ್ತದೆ. ಎಲ್ಲಿಯಾದರೂ ದಂಪತಿಗಳ ಕಲಹದ ಪರಿಣಾಮದಲ್ಲಿ ಆತ್ಮಹತ್ಯೆ ಆಗಿದ್ದರೆ, ಅಲ್ಲಿ ಒಂದು ಪಕ್ಷದವರು ಕಲಹ ಸ್ಥಾನವನ್ನು ಬಿಟ್ಟು ಎದ್ದುಹೋದದ್ದೇ ಮುಖ್ಯ ಕಾರಣವಾಗಿ ತಿಳಿದು ಬಂದಿದೆ. ಜಗಳ ಮೈದಾನಿನಲ್ಲಿ ಕಲೆತು ಎದುರು ಬಂದು ಸಮ್ಮುಖ ಸಂಗ್ರಾಮದಲ್ಲಿ ಜಗಳವನ್ನು ನಿವೃತ್ತಿಮಾಡುವುದೇ ಇಲ್ಲಿಯ ನಿಯಮವು.

ಜಗಳವು ಶಾಂತವಾಗಿ ಹೃದಯಗಳು ಪರಸ್ಪರ ಜೋಡಾದ ಮೇಲೆ ಚೈತ್ರಮಾಸದ ಸುಂಟರುಗಾಳಿಯಂತೆ ಗಾಳಿ ಧೂಳುಗಳೆಲ್ಲಾ ಅಡಗಿದ ಮೇಲೆ ನಿರ್ಮಲವಾದ ಶೋಭೆಯೂ ಅಪೂರ್ವವಾದ ಪ್ರಕಾಶವೂ ಕಾಣ ಬರುವುದು. ಸತಿ-ಪತಿಯರ ಕಲಹದ ಅಂತಿಮ ಫಲವು ಬಹಳ ಸಿಹಿಯಾಗಿರುತ್ತದೆ.

ತಿಳುವಳಿಕೆಯುಳ್ಳ ಮನುಷ್ಯನು ಈ ಅಂತಿಮಫಲವು ಬೇಗನೇ ಸಿಗುವಂತೆ ಪ್ರಯತ್ನಮಾಡಬೇಕು. ಜಗಳವಾಗುತ್ತದೆ, ಆದರೆ ಆಗಲಿ. ಏನೂ ಕೆಡಕಿಲ್ಲ. ಆದರೆ ಆ ಜಗಳವು ಫಕ್ಕನೇ ಶಾಂತವಾಗಬೇಕು. ಬಹಳ ಸಮಯದ ವರೆಗೆ ನಿಲ್ಲಬಾರದು. ಇದಕ್ಕೆ ಜಾಗ್ರತರಾಗಿರಬೇಕು. ದೇವಾಸುರರು ಸಾಗರವನ್ನು ಮಥಿಸುವಾಗ ಹೊರಟ ವಿಷವನ್ನು ಮಹಾದೇವನು ಕುಡಿದುಬಿಟ್ಟನು. ಅದೇ ರೀತಿ ಪ್ರಣಯರೂಪಿಯಾದ ಕ್ಷೀರ ಸಾಗರದಿಂದ ಹುಟ್ಟಿದ ಕಲಹರೂಪಿಯಾದ ಕಾಲಕೂಟವನ್ನು ಅಲ್ಲಿಯ ಮಹಾದೇವನು ಫಕ್ಕನೇ ಕುಡಿದುಬಿಡಬೇಕು. ಎಷ್ಟು ಬೇಗ ಸಾಧ್ಯವೋ, ಅಷ್ಟು ಬೇಗನೇ ಅದನ್ನು ಕುಡಿದುಬಿಡಬೇಕು. ಇಲ್ಲವಾದರೆ ಸಮುದ್ರವೇ ಶೋಷಿಸಿ ಹೋದೀತು.

ಹಲಕೆಲವು ಮನುಷ್ಯರು ಜಗಳವನ್ನು ಪರಿಹರಿಸಲು ಬಾಹ್ಯಕ್ರೋಧವನ್ನು ಧರಿಸುತ್ತಾರೆ. ಕೆಲವು ಕಡೆ ಇದರಿಂದಲೂ ಕೆಲಸವಾಗುತ್ತದೆ. ದೊಡ್ಡ ಬೆಂಕಿಯಿಂದ ಸಣ್ಣ ಬೆಂಕಿಯು ಆರಿಹೋಗುತ್ತದೆ. ಆದರೆ

ನನ್ನ ತಿಳುವಳಿಕೆಗೆ ಈ ಮೂದರಿಯು ಶುದ್ಧವಲ್ಲ. ಈ ರೀತಿಯಿಂದ ಸತಿ-ಪತಿಯರ ಜಗಳದ ನಿಜವಾದ ಪ್ರಯೋಜನವು ಹೃದಯಗಳನ್ನು ಅಭಿನ್ನವಾಗಿ ಮಾಡುವುದು; ಯಾವದೂ ಸಿದ್ಧಿಯಾಗಲಾರದು. ಬಹಳ ಜನರು ಜಗಳವಾದಾಗ ಊಟ ತಿಂಡಿ ಬಿಟ್ಟುಬಿಡುತ್ತಾರೆ. ತಲೆ ಬಡೆದುಕೊಳ್ಳಲಾರಂಭಿಸುತ್ತಾರೆ. ಅಥವಾ ಬೇರೆ ಯಾವದಾದರೂ ಉಪಾಯದಿಂದ ಶರೀರಕ್ಕೆ ದುಃಖ ಕೊಡುತ್ತಾರೆ. ಈ ತರದಲ್ಲಿಯೂ ಕೂಡ ಜಗಳವೇನೋ ನಿಲ್ಲುತ್ತದೆ. ಬಹಳ ಬೇಗ ನಿಂತುಹೋಗುತ್ತದೆ. ಆದರೆ ಈ ಉಪಾಯವೂ ಶುದ್ಧವಲ್ಲ. ಆಸುರೀ ಔಷಧವನ್ನು ತಿನ್ನುವಂತೆ ಇದರಿಂದ ಫಲವೇನೋ ಬಹು ಬೇಗನೇ ಸಿಗುತ್ತದೆ. ಆದರೆ ಒಳಗಿನ ಭಾವನೆಗೆ ಹಾನಿತಟ್ಟುತ್ತದೆ. ಈ ರೀತಿಯ ಕೆಟ್ಟ ಉಪಾಯಗಳನ್ನು ಬಾರಿ ಬಾರಿಗೂ ಆಚರಣೆಗೆ (ಕೆಲಸಕ್ಕೆ) ತರುವುದರಿಂದ ಹೃದಯವು ಅಭಿನ್ನವಾಗಿರುವುದು ದೂರ ಹೋಗಿ, ಪ್ರಣಯದ ನಿಜವಾದ ಪ್ರೇಮವು ಸಹ ಸಡಿಲಾಗುವುದು. ಮಹಾದೇವನು ರುದ್ರಮೂರ್ತಿಯಿಂದ ಕಾಲಕೂಟವನ್ನು ಕುಡಿದಿರಲಿಲ್ಲ. ಶಿವನ ಮೂರ್ತಿಯಿಂದಲೇ ಕುಡಿದಿದ್ದನು. ನನ್ನ ತಿಳುವಳಿಕೆಗೆ ಸತಿ-ಪತಿಯರ ಜಗಳದಲ್ಲಿ ನಿಜವಾದ ಫಲವನ್ನು ಪಡೆಯಬೇಕಾದರೆ ಈ ಕೆಳಗಿನ ನಿಯಮಗಳನ್ನು ಪಾಲಿಸಬೇಕು.

(೧) ತಮ್ಮ ಜಗಳವನ್ನು ನಿಲ್ಲಿಸಲು ಯಾರನ್ನೂ ಮಧ್ಯಸ್ಥರನ್ನಾಗಿ ಮಾಡಬಾರದು. (೨) ತಮ್ಮೊಳಗಿನ ಮತಭೇದವನ್ನು ತಿಳಿದು ತಿಳಿದೂ ಮತ್ತು ಯಾರಲ್ಲಿಯೂ ಹೇಳಬಾರದು. (೩) ಯಾರಾದರೂ ತಿಳುವಳಿಕೆಯಿಲ್ಲದ ಮನುಷ್ಯರು ನಿಮ್ಮ ಕಲಹದ ಮಧ್ಯಸ್ಥಿಕೆಗೆ ಬಂದರೆ ಮತ್ತು ನಿಮ್ಮ ಜಗಳದಲ್ಲಿ ಕೈಯಿಕ್ಕಿದರೆ ಅವರ ಕಡೆಗೆ ಸ್ವಲ್ಪವೂ ಮುಖತೋರಿಸಬೇಡಿರಿ. ಅರ್ಥಾತ್ ಹೇಳಬೇಡಿ. (೪) ಸೋತವನ್ನಾಗಿ ತಿಳಿಯಲು ನಾಚಬೇಡಿ. ಸತಿ-ಪತಿಯರ ಕಲಹದಲ್ಲಿ ಯಾರು ಸೋತವನ್ನಾಗಿ ಎಣಿಸುತ್ತಾರೆಯೋ ಅವರಿಗೇ ಜಯವಾಗುತ್ತದೆ. (೫) ಎಷ್ಟರ ವರೆಗೆ ಜಗಳವು ಅಳಿಯುವುದಿಲ್ಲವೋ, ಅದು ವರೆಗೆ ಯಾವ ಕೆಲಸವನ್ನೂ ಮಾಡಬೇಡಿ. ಗೃಹವು ಮಣ್ಣುಪಾಲಾಗಲಿ, ಬೇಕಾದರೆ ಊರು ಮುಳುಗಲಿ, ಏನೂ

ಚಿಂತೆಯಿಲ್ಲ. ಎಷ್ಟರ ವರೆಗೆ ತಮ್ಮ ಜಗಳ ಮುಗಿಯುವದಿಲ್ಲವೋ, ಅಷ್ಟರ ವರೆಗೆ ಯಾವ ಕೆಲಸವೂ ಆಗಲಾರದು. ಯಾರಲ್ಲಿಯೂ ಮಾತಾಡಲೂ ಆಗಲಾರದು. ಊಟ ತಿಂಡಿಯು ಸಹ ಬೇಕಾಗಲಾರದು. ನಿದ್ರೆ ಬರಲು ಮಲಗಲೂ ಸಹ ಆಗುವುದಿಲ್ಲ. ನಿದ್ರೆಯ ಹೆಸರೇ ಬಳಿಗೆ (ಹತ್ತಿರ) ಬರುವುದಿಲ್ಲ.

ಈ ಐದು ನಿಯಮಗಳು ಬಹಳ ದೊಡ್ಡವು. ವಿಶೇಷವಾಗಿ ಐದನೇ ನಿಯಮವು ಮತ್ತು ಅದರ ಅಂತಿಮಭಾಗವು ಎಲ್ಲಾ ನಿಯಮಗಳ ಸಾರವು. ಇದನ್ನು ಮಾನಿಸಿ ನಡೆದರೆ ಸತಿ-ಪತಿಯರಲ್ಲಿ ಕಲಹವು ಬಹಳ ಕಡಿಮೆಯಾಗುವುದು. ಒಂದು ವೇಳೆ ಆದರೂ ಬಹಳ ಸ್ವಲ್ಪ ಹೊತ್ತು ನಿಲ್ಲುವುದು. ಮತ್ತು ಶಾಂತವಾದ ಮೇಲೆ ಅಂತಃಕರಣವು ನಿರ್ಮಲವಾಗುತ್ತದೆ. ಸುಖತರಂಗಗಳಲ್ಲಿ ಮುಳುಗೇಳಲಾರಂಭಿಸುತ್ತದೆ. ಸತಿ-ಪತಿಯರ ಜಗಳಾಂತ್ಯದಲ್ಲಿ ಕಣ್ಣಿನಿಂದ ಯಾವ ದುಃಖಾಶ್ರುಗಳುದುರುತ್ತವೋ, ಅದೇ ನಿರ್ಮಲವಾದ ಹೃದಯದ ಲಕ್ಷಣವೆಂದು ತಿಳಿಯಬೇಕು. ಮೂರುನಾಲ್ಕು ಸಲ ಮಿಂಚು ಹೊಳೆಯಿತು. ಮತ್ತೆ ಮಳೆ ಬಂತು. ಭೂಮಿ ತಣ್ಣಗಾಯಿತು.

---

## ಲಜ್ಜಾ.

ಲಜ್ಜೆ ಯೆಂಬದು ಸ್ತ್ರೀಯರಿಗೊಂದು ಸುಂದರವಾದ ಆಭರಣವು. ಚಿನ್ನದ ಸರ, ಹಾರ, ಬಳೆಗಳು ಮುಂತಾದವುಗಳನ್ನು ಧರಿಸುವುದರಿಂದ ಯಾವರೀತಿ ಸುಂದರತೆಯು ಸ್ವಲ್ಪ ಹೆಚ್ಚಾಗುತ್ತದೋ, ಅದಕ್ಕಿಂತಲೂ ಲಜ್ಜೆಯಿಂದ ಅಧಿಕವಾದ ಸುಂದರತೆಯು ಉಂಟಾಗುತ್ತದೆ. ವೇಶ್ಯೆಯನ್ನೂ ಮತ್ತು ಸಾಹಸಿಯಾದ ಸ್ತ್ರೀಯನ್ನೂ ನೋಡಿದ ಕೂಡಲೇ ಒಂದು ತರದ ಕ್ರೋಧವೂ ತುಚ್ಛಭಾವನೆಯೂ ಉಂಟಾಗುತ್ತದೆಂಬದು ಎಲ್ಲರೂ ತಿಳಿದ ಸಂಗತಿಯೇ ಆಗಿದೆ. ಆದರೆ ಲಜ್ಜೆಯಿಂದ ಆಚ್ಛಾದಿತಳಾದ ಸ್ತ್ರೀಯನ್ನು ನೋಡಿದ ಕೂಡಲೇ ಒಂದು ತರದ ಭಕ್ತಿಯ ಭಾವನೆಯುಂಟಾಗುತ್ತದೆ.

ಮತ್ತು ಅವಳ ಮನೋಹರವಾದ ನಾಚಿಕೆಯಿಂದ ತುಂಬಿದ ಮುಖವು ನೂರು ಪಾಲು ಹೆಚ್ಚು ಸುಂದರವಾಗಿ ಕಾಣುತ್ತದೆ. ಪರಮಾತ್ಮನು ಪುರುಷನ ಹೃದಯದಲ್ಲಿ ಸಾಹಸ, ಉದ್ದಾಮತನ, ದೃಢತೆ ಮತ್ತು ನಿರ್ಭಯಾದಿ ಗುಣಗಳನ್ನು ಇಟ್ಟಿರುತ್ತಾನೆ. ಮತ್ತು ಸ್ತ್ರೀಯರ ಹೃದಯದಲ್ಲಿ ಲಜ್ಜಾ, ಕೋಮಲತಾ, ಭಯ, ಸ್ನೇಹ, ಮಮತೆ ಮತ್ತು ಪರರ ದುಃಖದಲ್ಲಿ ದುಃಖಿಸುವ ಗುಣವನ್ನು ಸೃಜಿಸಿರುತ್ತಾನೆ. ಪುರುಷರಲ್ಲಿ ಸಾಹಸ, ಉದ್ದಾಮತನ ಇವುಗಳಿಲ್ಲದಿದ್ದರೆ ಅವರು ಸಹ ಸ್ತ್ರೀಯರಂತೆ ಕೋಮಲ ಪ್ರಕೃತಿಯವರಾಗಿರುತ್ತಿದ್ದರು. ಅಸೇ ರೀತಿ ಸ್ತ್ರೀಯರಲ್ಲಿ ಲಜ್ಜಾ, ಕೋಮಲತಾದಿ ಗುಣಗಳಿಲ್ಲದಿದ್ದರೆ ಅವರು ಸಹ ಪುರುಷರಂತೆ ಕಠಿಣಹೃದಯರಾಗುತ್ತಿದ್ದರು. ಇದರಲ್ಲಿ ಯಾವ ಮಾತೂ ಒಳ್ಳೇದಲ್ಲ. ಜಗದೀಶ್ವರನು ಪುರುಷ ಮತ್ತು ಸ್ತ್ರೀ ಇವರಿಬ್ಬರಿಗೂ ಬೇರೆ ಬೇರೆ ಗುಣಗಳನ್ನು ಕೊಟ್ಟಿರುತ್ತಾನೆ. ಇವರಿಬ್ಬರೂ ತಮ್ಮ ತಮ್ಮ ಗುಣಗಳನ್ನು ಹೆಚ್ಚಿಸಿಕೊಳ್ಳಬೇಕು. ಲಜ್ಜೆಯು ಸ್ತ್ರೀಯರಿಗೆ ಎಲ್ಲಕ್ಕೂ ಮಿಗಿಲಾದ ಭೂಷಣವು. ಯಾವ ಸ್ತ್ರೀಯು ತಿಳಿದು ತಿಳಿದೂ ಇದನ್ನು ಕಳಕೊಳ್ಳುತ್ತಾಳೋ, ಅವಳು ಕ್ಷಣ ಕ್ಷಣಕ್ಕೂ ಆಪತ್ತನ್ನು ಅನುಭವಿಸಬೇಕಾಗುತ್ತದೆ. ಮತ್ತು ಯಾವ ಸ್ತ್ರೀಯು ತನ್ನ ಲಜ್ಜೆಯನ್ನು ತಿಕ್ಕಿ ತೊಳದು ಪ್ರಕಾಶಿಸುವಂತೆ ಮಾಡುತ್ತಾಳೋ, ಅವಳಿಗೆ ಭಗವಂತನು ದಿನದಿನಕ್ಕೂ ಸುಖಸಮೃದ್ಧಿಯನ್ನು ಹೆಚ್ಚಿಸುತ್ತಾನೆ.

ಲಜ್ಜೆಯಲ್ಲಿ ಬಹಳವಾದ ಗುಣಗಳಿವೆ. ಲಜ್ಜೆಯ ಜ್ಞಾನವಿದ್ದರೆ ಮನುಷ್ಯನು ಬಹಳವಾಗಿ ಗಂಭೀರ, ಧೀರ ಮತ್ತು ಒಳ್ಳೇ ಸ್ವಭಾವದವನೂ ಆಗುತ್ತಾನೆ. ಲಜ್ಜಾವತಿಯಾದ ಸ್ತ್ರೀಯ ಮುಖದಿಂದ ಎಂದಿಗೂ ಅಪಶಬ್ದಗಳು ಹೊರಡಲಾರವು. ಪರನಿಂದೆ ಮತ್ತು ಕಲಹ ಮೊದಲಾದ ನೀಚವೃತ್ತಿಗಳು ಅವಳ ಮನಸ್ಸಿನಲ್ಲಿ ಹುಟ್ಟಲಾರವು. ಲಜ್ಜೆಯಲ್ಲಿರುವ ಉತ್ತಮ ಗುಣವೆಂದರೆ ಅದು ಯಾರನ್ನೂ ದುರ್ಮಾರ್ಗದಲ್ಲಿ ಕಾಲಿಡಲು ಬಿಡುವುದಿಲ್ಲ. ಕಾರಣ—ಯಾವಾಗಲಾದರೂ ಯಾವ ಕಾರಣದಿಂದಲಾದರೂ ವಿವಶರಾಗಿ ದುಷ್ಟಾಚರಣೆಯನ್ನು ಮಾಡಲು ಮನಸ್ಸಾದರೂ ಕೂಡ

ಲಜ್ಜೆಯು ಬಂದು ಅದಕ್ಕೆ ತೊಂದರೆಪಡಿಸುತ್ತದೆ. ನಿರ್ಲಜ್ಜತೆಯು ಸ್ತ್ರೀಯರಿಗೆ ಬಹಳ ಕೆಟ್ಟದ್ದಾಗಿದೆ. ಲಜ್ಜಾರಹಿತಳಾದ ಸ್ತ್ರೀಯು ಬಹಳ ವಾಗಿ ಚಂಚಲಳೂ, ಅಸ್ಥಿರಳೂ, ಜಗಳಗಂಟಿಯೂ ಆಗಿರುತ್ತಾಳೆ. ಪರರ ನಿಂದೆ ಅಥವಾ ಪರರ ಕೆಟ್ಟದ್ದನ್ನು ಹೇಳುವುದರಲ್ಲಿ ಅವಳು ಬಹಳ ಕುಶಲ ಳಿರುತ್ತಾಳೆ. ಇಂಥಾ ಸ್ತ್ರೀಯರ ನಡೆನುಡಿಯು ಕ್ಷಣಮಾತ್ರದಲ್ಲಿ ಕೆಟ್ಟು ಹೋಗುತ್ತದೆ. ಯಾವ ಬುದ್ಧಿವಂತನಾದ ಮನುಷ್ಯನಿಗೂ ನಿರ್ಲಜ್ಜತೆ ಯನ್ನು ಹೆಚ್ಚಿಸುವುದು ಉಚಿತವಲ್ಲ. ಬಹಳ ಜನ ಅಲ್ಪಬುದ್ಧಿಯವರೂ, ಹುಡುಗರೂ, ಮುಂದೆ ಇದರ ಪರಿಣಾಮವೇನಾಗುವುದೆಂಬದನ್ನು ತಿಳಿ ಯದವರೂ, ವಿಲಾಯತಿಯ ನಡತೆಯ ನಕಲನ್ನು (ಮಾದರಿ) ಹಿಡಿದು ಕೊಂಡು ಹಳೆಯ ದೇಶೀ ನಡತೆಯನ್ನು ತೃಣಕ್ಕೆ ಸಮಾನವಾಗಿ ಎಣಿಸು ತ್ತಾರೆಯೋ, ಅವರು ನಿರ್ಲಜ್ಜತೆಯನ್ನು ಸಭ್ಯತೆಯ ಚಿಹ್ನೆಯೆಂದು ತಿಳಿದು ಅದನ್ನು ವೃದ್ಧಿಪಡಿಸುತ್ತಾರೆಂಬದು ನನಗೆ ತಿಳಿದಿದೆ. ಇವರನ್ನು ಬುದ್ಧಿಹೀನರೆಂದು ಹೇಳುವ ಆವಶ್ಯಕವಿರುವುದಿಲ್ಲ. ಮತ್ತು ದೊಡ್ಡ ದಾದ ಮಡುವಿನಲ್ಲಿ ಮುಳುಗಿರುತ್ತಾರೆಂಬದೂ ಸಹ ಹೇಳಬೇಕಾಗಿಲ್ಲ.

ಯಾವ ಕುಲಕಾಮಿನಿಯರಾದರೂ ಇಂಥಾ ಪತಿಯ ಉತ್ತೇ ಜನದಿಂದ ಲಜ್ಜೆಯನ್ನು ತ್ಯಜಿಸಿಬಿಡಬಾರದು. ಒಂದು ಪರಿವಾರದ ಯಾವ ಹುಡುಗಿಯಾದರೂ ಸ್ವಲ್ಪ ನಿರ್ಲಜ್ಜಳಾಗಿರುವುದನ್ನು ಕಂಡ ಕೂಡಲೇ ಮನೆಯ ಯಜಮಾನಿಯು ಕೂಡಲೇ ಅವಳನ್ನು ಬೆದರಿಸಿ ಇನ್ನು ಯಾವಾಗಲೂ ಅವಳು ಇಂಥಾ ಕೆಟ್ಟ ನಡತೆಯಲ್ಲಿ ಹೋಗದಂತೆ ನೋಡಿಕೊಳ್ಳಬೇಕಲ್ಲದೆ ಅವಳ ಕಡೆಗೆ ಚೆನ್ನಾಗಿ ದೃಷ್ಟಿಯಿಟ್ಟಿರಬೇಕು.

ಬಹಳ ಸ್ತ್ರೀಯರು ತಿಳಿದು ತಿಳಿದೇ ಸ್ವಲ್ಪ ನಿರ್ಲಜ್ಜರಾಗಿ ಪುರುಷ ರಲ್ಲಿ ಹಾಸ್ಯಮಾಡುತ್ತಿರುತ್ತಾರೆ. ಅವಳು ನಾಚಿಗೆ ಬಿಟ್ಟ ಹೃದಯದಿಂದ ಅವರಲ್ಲಿ ಮಾತಾಡಿದರೆ ಅವರು ಅವಳನ್ನು ದೊಡ್ಡ ಬುದ್ಧಿವಂತಳೆಂದು ತಿಳಿದುಕೊಂಡಾರೆಂದು ಅವಳು ತಿಳಿದುಕೊಳ್ಳುತ್ತಾಳೆ. ಇದು ಅವಳ ಅಜ್ಞಾನವು. ಬುದ್ಧಿವಂತರಾದ ಪುರುಷರು ನಿರ್ಲಜ್ಜಳಾಗಿ ಹಾಸ್ಯ, ನಗು ಮುಂತಾದ ನಿರ್ಲಜ್ಜತನದ ವರ್ತನದಿಂದಿರುವವಳಲ್ಲಿ ಮಾತಾಡುತ್ತಿರು

ವಾಗ ಎದುರಿನಲ್ಲಿ ಬೇಕಾದರೆ ಏನೂ ಹೇಳದಿರಲಿ, ಆದರೆ ಮನಸ್ಸಿನಲ್ಲಿ ಅವಳನ್ನು ಬಹಳ ನೀಚಳೆಂದೂ ಮತ್ತು ಸಾರರಹಿತಳೆಂದೂ ತಿಳಿಯುತ್ತಾರೆ. ಇಂಗ್ಲೀಷರಲ್ಲಿ ಬಹಳವಾಗಿ ಸ್ತ್ರೀಯರು ನಿರ್ಲಜ್ಜರಾಗಿ ಎಲ್ಲರಲ್ಲಿಯೂ ರಾಜಾರೂಢಿಯಾಗಿ ಹಾಸ್ಯಮಾಡುತ್ತಿರುತ್ತಾರೆ. ಆದರೆ ವಿಚಾರವಂತರಾದ ಇಂಗ್ಲೀಷರೂ ಕೂಡ ಇದನ್ನು ಒಳ್ಳೇದೆಂದು ಎಣಿಸುವುದಿಲ್ಲ.

"ಕವೇಶ"ನೆಂಬ ಹೆಸರುಳ್ಳ ಇಂಗ್ಲೀಷು ಗ್ರಂಥಕಾರನೊಬ್ಬನು ಏನು ಹೇಳಿರುತ್ತಾನೆಂದರೆ—ಚಪಲತೆ ಮತ್ತು ರಸಿಕತೆಯನ್ನು ಅಪೇಕ್ಷಿಸುವ ಸ್ತ್ರೀಯರಲ್ಲಿ ಮಾತಾಡುವಾಗ ಪುರುಷನಿಗೆ ಸುಖವಿದೆ ಎಂದು ಅವಶ್ಯವಾಗಿ ತಿಳಿಯುತ್ತಾರೆ. ಆದರೆ ಮನಸ್ಸಿನಲ್ಲಿ ಇಂಥಾ ಸ್ತ್ರೀಯನ್ನು ಯಾರೂ ಪ್ರೀತಿಸುವುದಿಲ್ಲ. ಮತ್ತು ಯಾವ ಪತಿಯಾದರೂ ತನ್ನ ಪತ್ನಿಯು ಹೀಗಾಗುವುದನ್ನು ಸಮ್ಮತಿಸಲಿಕ್ಕಿಲ್ಲ. ಮತ್ತು ಸಮ್ಮತಿಸುವ ಹಾಗೂ ಇಲ್ಲ. ಕೆಲವು ಸ್ತ್ರೀಯರು ಎಂದಾದರೊಮ್ಮೆ ಪರಪುರುಷರಲ್ಲಿ ಹಾಸ್ಯವಾಡಿದರೆ ದೋಷವೇನೆಂದು ತಿಳಿಯುತ್ತಾರೆ. ಆದರೆ ಅವರು ಯಾರು ತಮ್ಮ ಗಂಭೀರತೆಯನ್ನು ರಕ್ಷಿಸಿಕೊಂಡು ಹಾಸ್ಯ (ರಸಿಕತೆ) ಮಾಡುವುದನ್ನು ತಿಳಿಯುವುದಿಲ್ಲವೋ, ಅವರಿಗೆ ಹಾಸ್ಯಮಾಡಲೂ ಬಾರದು ಎಂಬದನ್ನು ತಿಳಿದುಕೊಳ್ಳಬೇಕು.

ಕೆಲವು ಸ್ತ್ರೀಯರು ಬೇರೆಯೇ ಒಂದು ವಿಧವಾದ ಲಜ್ಜೆಯನ್ನು ತೋರಿಸುತ್ತಾರೆ. ಅವರು ತಮ್ಮ ತಂದೆ, ಅಣ್ಣ, ಚಿಕ್ಕಪ್ಪ, ಮೈದುನ ಮೊದಲಾದ ಆತ್ಮೀಯ ಸ್ವಜನರನ್ನು ನೋಡಿದ ಕೂಡಲೇ ನಾಚಿಗೆಯಿಂದ ಕರಗಿಹೋಗುತ್ತಾರೆ. ಆದರೆ ನದಿಗೆ ಸ್ನಾನಕ್ಕೆ ಹೋದಾಗಲೂ, ದೇವತಾದರ್ಶನಕ್ಕೋಸ್ಕರ ಹೋದಾಗಲೂ ತಮ್ಮ ಸ್ವಜನರ ಕಣ್ಣು ತಪ್ಪಿಸಿ ಅಪರಿಚಿತರಾದ ಪರಪುರುಷರ ಮುಂದೆ ಕೇವಲ ನಿರ್ಲಜ್ಜರಾಗಿ ಬಿಡುತ್ತಾರೆ. ತಮ್ಮ ಕಂಠಸ್ವರವನ್ನು ಪಂಚಮ ಸ್ವರದ ವರೆಗೂ ಏರಿಸಲೂ ಸಹ ಹಿಂಜರಿಯುವುದಿಲ್ಲ. ಇದರಿಂದ ಲಜ್ಜೆಗೆ ಬದಲಾಗಿ ನಿರ್ಲಜ್ಜತೆಯ ಪರಿಚಯವೇ ಅಧಿಕವಾಗಿ ಸಿಗುತ್ತದೋ ಇಲ್ಲವೋ? ಹೇಳಿರಿ.

ನಾನು ಒಂದು ಸ್ತ್ರೀಯನ್ನು ನೋಡಿರುತ್ತೇನೆ. ಅವಳು ಹೆದ್ದಾರಿಗೆ ಸರಿಯಾಗಿ ಎದುರುಗಡೆ ಇರುವ ಕಿಟಕಿಯ ಬಳಿ ನಿಂತಿದ್ದಳು. ದಾರಿ ಹೋಕರು ಅವಳನ್ನು ನೋಡಿ ಹಾಸ್ಯಮಾಡುತ್ತಿದ್ದರು. ಆದರೆ ಅವರ ಮಾತುಗಳನ್ನು ಕೇಳಿ ಅವಳಿಗೆ ಲಜ್ಜೆಯಾಗುತ್ತಿರಲಿಲ್ಲ. ಅವಮಾನವೂ ಆಗುತ್ತಿರಲಿಲ್ಲ. ಮತ್ತು ತನ್ನ ಮನೆಯವರು ಯಾರಾದರೂ ಅಥವಾ ಅವರ ಪರಿಚಯವಿದ್ದವರು ಯಾರಾದರೂ ಆ ದಾರಿಯಲ್ಲಿ ಬಂದಕೂಡಲೇ ತಲೆಯ ಮೇಲಿನ ಸೆರಗನ್ನು ಎಳೆದುಕೊಂಡು ಒಳಗಡೆ ಅಡಗುತ್ತಿದ್ದಳು. ಒಳ್ಳೇದು, ಹೇಳಿ ನೋಡೋಣ. ಇದು ಎಂಥಾ ಲಜ್ಜೆಯು? ಇಂಥಾ ಲಜ್ಜೆಯ ಪ್ರಶಂಸೆಯನ್ನು ನಾನು ಮಾಡಲಾರೆನು. ಬುದ್ಧಿವಂತಿಯರಾದ ಪ್ರಿಯ ಭಗಿನಿಯರು ತಾವೇ ಇದರ ವಿಚಾರವನ್ನು ಮಾಡಿಕೊಳ್ಳುವರು.

ಲಜ್ಜೆಯ ಗುಣವು ಬಹಳವಿರುವುದೆಂದು ನಾನು ಮೊದಲೇ ಹೇಳಿ ರುತ್ತೇನೆ. ಲಜ್ಜಾವತಿಯಾದ ಸ್ತ್ರೀಗೆ ಎಲ್ಲರೂ ಹೆದರುತ್ತಿರುತ್ತಾರೆ. ಯಾವದಾದರೂ ಅನೀತಿಯ ಮಾತನ್ನಾಡಿದರೆ ಅವಳು ಲಜ್ಜಿತಳೋ ಅಥವಾ ದುಃಖಿತಳೋ ಆಗುವಳೆಂಬ ಕಾರಣದಿಂದ ಅವಳೆದುರು ಮಾತಾ ಡುವಾಗ ಬಹಳ ಸಾವಧಾನದಿಂದ ಮಾತುಕಥೆ ಆಡುತ್ತಾರೆ.

ನಿರ್ಲಜ್ಜರಾದ ಸ್ತ್ರೀಯರ ಸನ್ಮಾನವನ್ನು ಯಾರೂ ಮಾಡುವುದಿಲ್ಲ. ಅವಳ ಎದುರಿನಲ್ಲಿ ಯಾರ ಮನಸ್ಸಿನಲ್ಲಿ ಏನು ಬರುತ್ತದೋ, ಅವರು ಅದನ್ನೇ ಆಡಿಬಿಡುತ್ತಾರೆ. ಎಲ್ಲಿ ವರೆಗೆಂದರೆ, ಅವರ ದಾಸ ದಾಸಿ ಯರು ಸಹ ಅವರನ್ನು ಚೆನ್ನಾಗಿ ಮಾನಿಸುವುದಿಲ್ಲ. ಪಂಡಿತರೂ ಕೂಡ "ನಿರ್ಲಜ್ಜಾಸ್ತು ಕುಲಸ್ತ್ರಿಯಃ" ಎಂದು ಹೇಳಿ ನಿರ್ಲಜ್ಜರಾದ ಕುಲಸ್ತ್ರೀ ಯರನ್ನು ನಿಂದಿಸಿ ಬರೆದಿರುತ್ತಾರೆ. ಭಾರತ ಲಲನೆಯರು ಎಲ್ಲಾ ಯುಗ ಗಳಲ್ಲಿಯೂ ಲಜ್ಜಾಶೀಲೆಯರೆಂಬ ಪ್ರಶಂಸೆಯನ್ನು ಪಡೆಯುತ್ತಿದ್ದರು. ಈಗ ನನ್ನ ವಿನಂತಿ ಏನಂದರೆ; ಈಗಲೂ ಕೂಡ ನನ್ನ ಪ್ರಿಯ ಭಗಿನಿ ಯರು ಲಜ್ಜಾರೂಪೀ ಮಹಾರತ್ನವನ್ನು ಆದರಿಸುತ್ತಿರಲಿ. ಮತ್ತು ಯಾವ ಸ್ತ್ರೀಯು ಲಜ್ಜೆಯೆಂಬ ಅಮೂಲ್ಯವಾದ ಭೂಷಣದ ಮೇಲೆ ತಿಲಾಂಜಲಿಯನ್ನು ಕೊಟ್ಟುಬಿಟ್ಟಿರುತ್ತಾಳೋ, ಅವಳನ್ನು ತುಚ್ಛದೃಷ್ಟಿ

ಯಿಂದ ನೋಡುತ್ತಿರಲಿ ಎಂಬುದೇ ನನ್ನ ಸಹೋದರಿಯರಲ್ಲಿ ನನ್ನ ಪ್ರಾರ್ಥನೆಯಾಗಿದೆ.

## ಸುಂದರತಾ.

ಕೆಲವರು ಬಿಳಿಬಣ್ಣವನ್ನು ಪ್ರೀತಿಸುತ್ತಾರೆ. ಕೆಲವರು ಹದ ಕಪ್ಪನ್ನು ಪ್ರೀತಿಸಿ ಅದರಲ್ಲೇ ಮುಗ್ಧರಾಗಿಬಿಡುತ್ತಾರೆ. ರಾಮಚಂದ್ರನ ಶ್ಯಾಮವರ್ಣದ ಸುಂದರತೆಯನ್ನು ಕವಿಗಳು ವರ್ಣಿಸಿರುತ್ತಾರೆ. ಮತ್ತು ಸೀತೆಯ ಬಿಳಿಬಣ್ಣವನ್ನು ವರ್ಣಿಸಿರುತ್ತಾರೆ. ಕೆಲವೆಡೆ—

ಇಂದೀವರದಲಶ್ಯಾಮಂ ಕೋಟಿಕಂದರ್ಪಸನ್ನಿಭಂ ||

ಮತ್ತೆ ಕೆಲವೆಡೆ –

ರಾಮೋ ದೂರ್ವಾದಲಶ್ಯಾಮೋ ಜಾನಕೀ ಕಾನಕೀ ಲತಾ ||

ಕವಿಗಳು ಕೆಲವು ಕಡೆ ಶ್ಯಾಮವರ್ಣವನ್ನು ಹೊಗಳಿರುತ್ತಾರೆ. ಕೆಲವೆಡೆ ಬಿಳೀಬಣ್ಣವನ್ನು ಹೊಗಳಿರುತ್ತಾರೆ. ಜಾನಕಿಯ ವರ್ಣವು ಕನಕ ಅಥವಾ ಭಂಗಾರಕ್ಕೆ ಸಮಾನವಾಗಿದ್ದ ಕಾರಣ ವರ್ಣಿಸಲಿಕ್ಕೆ ಯೋಗ್ಯವೆಂದು ತಿಳಿಯಲಾಯಿತು. ಮತ್ತು ಕಾಳಿಕಾದೇವಿಯ ವರ್ಣವು ಕಪ್ಪು ಅಥವಾ ಶ್ಯಾಮವರ್ಣದಗೋಸ್ಕರ ವರ್ಣಿಸಲಾಯಿತು.

ನೀಲಾಂ ನೀಲಘನಶ್ಯಾಮಾಂ ನಮಾಮಿ ನೀಲಸುಂದರೀಂ ||
ಶ್ಯಾಮಾಂಗೀಂ ಶ್ಯಾಮಘಟಿತಾಂ ಶ್ಯಾಮವರ್ಣವಿಭೂಷಿತಾಂ ||

ಯೋಚಿಸುವ ಮಾತೇನಂದರೆ—ಸುಂದರತೆಯು ಕಪ್ಪುವರ್ಣದಲ್ಲಿದೆಯೋ? ಅಥವಾ ಬಿಳಿಯಲ್ಲಿದೆಯೋ?

ರಾಮಸ್ಯ ತು ವಿಶಾಲಾಕ್ಷೀ ಪೂರ್ಣೇಂದುಸದೃಶಾನನಾ |
ಧರ್ಮಪತ್ನೀ ಪ್ರಿಯಾ ನಿತ್ಯಂ ಭರ್ತುಃ ಪ್ರಿಯಹಿತೇ ರತಾ ||
ಸಾ ಸುಕೇಶೀ ಸುನಾಸೋರೂಃ ಸುರೂಪಾ ಚ ಯಶಸ್ವಿನೀ |
ದೇವತೇವ ವನಸ್ಯಾಸ್ಯ ರಾಜತೇ ಶ್ರೀರಿವಾಪರಾ ||

ತಪ್ತಕಾಂಚನವರ್ಣಾಭಾ ರಕ್ತತುಂಗನಖೀ ಶುಭಾ |
ಸೀತಾ ನಾಮ ವರಾರೋಹಾ ವೈದೇಹೀ ತನುಮಧ್ಯಮಾ ||

ಇಲ್ಲಿ ವಾಲ್ಮೀಕಿಮುನಿಯು ಜಾನಕೀ ಮಾತೆಯ ಬಣ್ಣವನ್ನು ಕಾಯಿಸಿದ ಸುವರ್ಣಕ್ಕೆ ಸಮಾನವಾಗಿದೆ ಎಂದು ಹೇಳಿರುತ್ತಾರೆ. ಅರ್ಥಾತ್ ಜಾನಕಿಯ ವರ್ಣವು ಸುವರ್ಣಕ್ಕೆ ಸಮಾನವಾಗಿ ಹೊಳೆಯುತ್ತಿತ್ತಾಗಿರಬಹುದು. ಆದುದರಿಂದಲೇ ಜಾನಕಿಯ ಸುಂದರತೆಯನ್ನು ಹೊಗಳಿರುತ್ತಾರೆ. ಕೆಲವರು ಶ್ಯಾಮವರ್ಣವನ್ನು ಮೋಹಿಸುತ್ತಾರೆ. ಮತ್ತೆ ಕೆಲವರು ಬಿಳಿಯನ್ನು. ಹಿಂದೂಸ್ಥಾನದಲ್ಲಿ ಕಪ್ಪು ಮತ್ತು ಬಿಳುಪು ಎರಡು ವರ್ಣಗಳೂ ಕಾಣಬರುತ್ತವೆ. ಕೆಲವರಿಗೆ ಕಪ್ಪು ಚಂದಕಾಣುತ್ತದೆ. ಕೆಲವರಿಗೆ ಬಿಳುಪು. ಅದಕ್ಕೋಸ್ಕರ ಎರಡೂ ಪ್ರಕಾರದ ಸುಂದರತೆಯ ವರ್ಣನೆಯು ಕಾಣಬರುತ್ತದೆ.

ಆದರೆ ಅದೇ ಬಣ್ಣದಿಂದ ಸುಂದರತೆಯ ಪರಿಚಯವಾಗುವುದಿಲ್ಲ. ದೊಡ್ಡ ದೊಡ್ಡ ಕಣ್ಣು, ಭ್ರಮರಕ್ಕೆ ಸಮಾನವಾದ ಕಪ್ಪು ಮತ್ತು ಉದ್ದವಾಗಿರುವ ಕೇಶರಾಶಿ, ಚಂದ್ರನ ಅಥವಾ ಕಮಲಕ್ಕೆ ಸಮಾನವಾದ ಮುಖಮಂಡಲ, ಗಜೇಂದ್ರ ಅಥವಾ ಮರಾಲದಂತಹ ಗಮನ ಇತ್ಯಾದಿ ಸುಂದರತೆಯ ಆದರ್ಶವನ್ನು ಹಿಂದೂಸ್ಥಾನದ ಕವಿಗಳು ವರ್ಣಿಸಿರುತ್ತಾರೆ. ನಾವು ಹಿಂದೂಸ್ಥಾನಿಯವರು. ನಾವು ಹಿಂದೂಸ್ಥಾನದ ಸುಂದರತೆಯಿಂದಲೇ ಸಂತುಷ್ಟರಾಗಿರಬೇಕಾಗುತ್ತದೆ. ಎರಡನೇ ವಿಧವಾದ ಸುಂದರತೆಯು ನಮಗೆ ಹೇಗೆ ಒಳ್ಳೇದಾಗಿ ತೋರುವುದು? ನಮ್ಮ ಎದುರು ಯಾರಾದರೂ ದೊಡ್ಡ ದೊಡ್ಡ ಹಲ್ಲಿನವಳೂ, ತಾಳವೃಕ್ಷದಂತೆ ನೀಟಾಗಿರುವವಳೂ, ಹಾರಿ ಹಾರಿ ನಡೆಯುವ ನಡೆಯುಳ್ಳವಳೂ, ಇಂಥಾ ಸ್ತ್ರೀಯರನ್ನು ತಂದು ನಮ್ಮ ಮುಂದೆ ನಿಲ್ಲಿಸಿ, ನೋಡು ಇವಳು ಎಷ್ಟು ಸುಂದರಳೆಂದು ಹೇಳಿದರೆ ಆಗ ಅವರು ಅವಳನ್ನು ಹಾಸ್ಯಮಾಡದೆ ಯಾಕೆ ಸುಮ್ಮನಿದ್ದಾರು? ನಾವು ಬೇಕಾದರೆ ನಗೋಣ, ಹಾಸ್ಯಮಾಡೋಣ. ಆದರೆ ನಿಜವಾಗಿಯೂ ಇಂಥಾ ಸ್ವರೂಪವತಿಯೇ ದೊಡ್ಡ ಹಲ್ಲು, ದೀರ್ಘಾಕಾರಳಾದ ನಾರಿಯೇ ಯೂರೋಪಿನಲ್ಲಿ ಮಹಾ ಸುಂದರಳೆಂದೂ

ಸುಸ್ವರೂಪಿಯೆಂದೂ ಎಣಿಸಲ್ಪಡುತ್ತಾಳೆ. ನಮ್ಮಂಥಾ ಹಳ್ಳಿಯ ಹಿಂದೂಸ್ಥಾನಿಯವರು ಕಪ್ಪುಕೂದಲಿಗೋಸ್ಕರ ಜೀವಬಿಡುತ್ತೇವೆ. ಆದರೆ ಸಭ್ಯ ಯೂರೋಪಿನವರು ಕಪ್ಪುಕೂದಲನ್ನು ತುಚ್ಛದೃಷ್ಟಿಯಿಂದ ನೋಡುತ್ತಾರೆ. ಯೂರೋಪಿನವರ ದೃಷ್ಟಿಗೆ ಬೂದು ಅಥವಾ ಕಂದುಬಣ್ಣದ ಕೂದಲೇ ಸುಂದರತೆಯ ನಿಶಾನಿಯಾಗಿರುತ್ತದೆ. ವನವಾಸಿಯಾದ ವಾಲ್ಮೀಕಿಯು ಸೀತೆಯ ಶರೀರವು ಮಧ್ಯಮವಾಗಿರುವುದರಿಂದ ಹೊಗಳಿರುತ್ತಾನೆ. ಮಧ್ಯಮದ ತಾತ್ಪರ್ಯ ಬಹಳ ಉದ್ದವೂ ಅಲ್ಲ, ಬಹಳ ಗಿಡ್ಡವೂ ಅಲ್ಲ. ಈ ಮಧ್ಯಮತರವೇ ಹಿಂದುಸ್ಥಾನದ ಲಲನೆಯರಿಗೆ ಶೋಭಿಸುತ್ತದೆ. ಆದರೆ ಯೂರೋಪಿನ ನಾರಿಯರು ಎಷ್ಟರ ವರೆಗೆ ಉದ್ದವಾಗುವುದಿಲ್ಲವೋ, ಅಷ್ಟರ ವರೆಗೆ ಸುಂದರಿಯರಲ್ಲಿ ಎಣಿಸಲ್ಪಡುವುದಿಲ್ಲ. ಎರಡು ದೇಶದ ಸುಂದರತೆಯ ರುಚಿಯಲ್ಲಿ ಎಷ್ಟು ಭಿನ್ನತೆಯಿದೆ ನೋಡಿರಿ.

ಬಹಳ ಪುಷ್ಟನಾದ ಮನುಷ್ಯನು ಅಥವಾ ಸ್ತ್ರೀಯು ಬಹಳ ಮಾಡಿ ಸುಂದರವೆಂದು ಎಲ್ಲಿಯೂ ತಿಳಿಯಲ್ಪಡುವುದಿಲ್ಲ. ಆದರೆ ಅದೂ ಒಂದು ದೇಶವಿದೆ. ಅಲ್ಲಿ ಸ್ತ್ರೀಯರು ಎಷ್ಟು ಪುಷ್ಟರಾಗುತ್ತಾರೋ, ಅಷ್ಟೇ ಅವರಿಗೆ ಸುಂದರಿಯರೆಂಬ ಗರ್ವ ಉಂಟಾಗುತ್ತದೆ. ಆಫ್ರಿಕಾದಲ್ಲಿಯ ಮೋಂಬಾಸಾದ ಒಬ್ಬಳು ರಾಜಕನ್ಯೆಯನ್ನು ಪುಷ್ಟಳನ್ನಾಗಿ ಮಾಡಲೋಸುಗ ನಾಲ್ವತ್ತು ಆಕಳುಗಳು ಸಾಕಲ್ಪಡುತ್ತಿದ್ದವು. ಸೀಕ್ ಎಂಬ ನಾಮದ ಒಬ್ಬ ಇಂಗ್ಲೀಷರು ತಮ್ಮ ಪುಸ್ತಕದಲ್ಲಿ ಬರೆದಿರುತ್ತಾರೇನೆಂದರೆ—ರಾಜಕುಮಾರಿಯು ನಲ್ವತ್ತು ಆಕಳುಗಳ ಹಾಲನ್ನು ಕುಡಿದು ಕುಡಿದು ಅವಳು ತನ್ನ ಹದಿನಾರನೇ ವಯಸ್ಸಿನಲ್ಲಿಯೇ ಐದು ನಿಮಿಷ ಸಹ ನಿಲ್ಲಲು ಸಮರ್ಥಳಾಗದಷ್ಟು ಪುಷ್ಟಳಾಗಿದ್ದಳು. ಸಾಹೇಬರು (ಫಾದರಿ) ಅವಳನ್ನು ನಿಲ್ಲಿಸಿದರು. ಆಗ ಅವಳು ಆಯಾಸದಿಂದ ಧಪ್ಪನೇ ಭೂಮಿಯಲ್ಲಿ ಬಿದ್ದುಬಿಟ್ಟಳು. ಪಾಪ, ಅವಳೇನು ಮಾಡಿಯಾಳು? "ಫ್ಯಾಶನ್" ಅವಲಂಬಿಸುವ ಯಾವ ಸ್ತ್ರೀಯು ತಾನೇ ಸುಂದರಳೆಂದು ಹೇಳಿಸಿಕೊಳ್ಳಲು ಇಷ್ಟಪಡುವುದಿಲ್ಲ? "ಫ್ಯಾಶನಿ"ಗೋಸ್ಕರ ರಾಜ

ಕುಮಾರಿಯನ್ನು ಈ ಪ್ರಕಾರ ಪುಷ್ಟಳನ್ನಾಗಿ ಮಾಡುವುದು ಉಚಿತವೇ ಆಗಿತ್ತು. ಆ ದೇಶದ ನೇತ್ರಗಳು ಸ್ಥೂಲಶರೀರದ ಸ್ತ್ರೀಯಲ್ಲಿಯೇ ಸುಂದರತೆಯ ಸುಖವನ್ನು ಅನುಭವಿಸುತ್ತಿದ್ದವು. ಸ್ಥೂಲಾಂಗಿಯಾಗಿ ಕಾಡವೃಕ್ಷಕ್ಕೆ ಸಮಾನಳಾದವಳ ಮುಂದೆ ಬಾಳೇಗಿಡದಂತೆ ಬಳಕುತ್ತಿರುವ ಭಂಗಾರದಂತಹ ವರ್ಣವುಳ್ಳ ಸೀತೆಯನ್ನು ಯಾರು ಸುಂದರಿಯೆಂದು ಹೇಳಿಯಾರು? ದೇಶದೇಶದ ರುಚಿಯೂ ಬೇರೆ ಬೇರೆಯಾಗಿರುತ್ತದೆ.

ಚೀನಾದೇಶದ ಸುಂದರಿಯರು ಎಷ್ಟರ ವರೆಗೆ ಸುಂದರಿಯರೆಂದು ಹೇಳಲ್ಪಡುವುದಿಲ್ಲವೆಂದರೆ, ಎಷ್ಟರ ವರೆಗೆ ಅವರ ಚರಣಕಮಲಗಳು ಸಣ್ಣವಾಗುವುದಿಲ್ಲವೋ, ಅಷ್ಟರ ವರೆಗೆ ಸುಂದರಿಯರಾಗುವುದಿಲ್ಲ. ಅವರ ಪಾದವು ದೊಡ್ಡದಾಗ(ಬೆಳೆಯ)ದಂತೆ ಆದಕ್ಕೋಸ್ಕರ ಬಾಲ್ಯಾವಸ್ಥೆಯಲ್ಲಿಯೇ ಅವರಿಗೆ ಕಬ್ಬಿಣದ ಬೂಟ್ಸು ಹಾಕಲ್ಪಡುತ್ತದೆ. ಶರೀರವೆಲ್ಲಾ ಬೆಳೆಯುತ್ತದೆ. ಆದರೆ ಕಬ್ಬಿಣದ ಬೂಟ್ಸನ್ನು ಹರಿದು(ತುಂಡುಮಾಡಿ) ಕೊಂಡು ಪಾದವು ಬೆಳೆಯುವುದಿಲ್ಲ. ಕನ್ಯೆಯು ನೋವಿನಿಂದ ಅಳುತ್ತಾಳೆ, ಕೂಗುತ್ತಾಳೆ. ಆದರೂ ಆ ಬೂಟ್ಸು ತೆಗಿಯಲ್ಪಡುವುದಿಲ್ಲ. ಯಾಕಂದರೆ—ಬೂಟ್ಸು ತೆಗಿಯುವುದರಿಂದ ಅವಳ ಚರಣಗಳ ಸುಂದರತೆಯು ನಷ್ಟವಾಗುತ್ತದೆ. ದೊಡ್ಡ ಮನೆತನದ ಚೀನಿ ಮಹಿಳೆಯರಿಂದ ಈ ಕಾರಣದಿಂದಲೇ ಬಹಳ ನಡಿಯುವುದಾಗುವುದಿಲ್ಲ. ಅವರು ಚರಣಗಳನ್ನು ಸುಂದರವಾಗಿ ಮಾಡಿಕೊಳ್ಳುವುದಕ್ಕೋಸ್ಕರ ಭಗವಂತನ ರಚನಾಕ್ರಮದಲ್ಲಿಯೂ ತಮ್ಮ ತೀವ್ರಬುದ್ಧಿಯ ಶಸ್ತ್ರವನ್ನು ಪ್ರಯೋಗಿಸುತ್ತಾರೆ.

ಒಬ್ಬ ಇಂಗ್ಲೀಷು ವಿದ್ವಾಂಸನು ಹೇಳಿರುತ್ತಾನೇನಂದರೆ—ಅವನು ಒಂದು ಸಲ ದೇಶಾಟನೆಮಾಡುತ್ತಾ ಒಂದು ಊರಿಗೆ ಹೋಗಿ ಸೇರಿದನು. ಆ ದಿನ ರವಿವಾರವಾಗಿತ್ತು. ಇಗರ್ಜಿಗಳಲ್ಲಿ ಘಟ್ಟಿಯಾಗಿ ಗಂಟೆ ಬಾರಿಸಲ್ಪಡುತ್ತಿತ್ತು. ಸ್ತ್ರೀ ಪುರುಷರು ಇಗರ್ಜಿಯ ಕಡೆಗೇ ಹೋಗುತ್ತಿದ್ದರು. ಎಲ್ಲರನ್ನೂ ನೋಡಿ ಈ ಯಾತ್ರಿಕನಾದ ಇಂಗ್ಲೀಷನು ಇಗರ್ಜಿಯೊಳ ಹೊಕ್ಕನು. ಮತ್ತು ಒಂದು ಮೂಲೆಯಲ್ಲಿ ಕುಳಿತುಕೊಂಡು ಪೂಜಾ,

ಪಾರಾಯಣ, ಭಜನಾದಿಗಳಲ್ಲಿ ಸಮ್ಮಿಲಿತನಾಗುವ ಆಲೋಚನೆಯಲ್ಲಿ ದ್ದನು. ಅವನು ಇಗರ್ಜಿಗೆ ಮುಟ್ಟಿದನೋ ಇಲ್ಲವೋ, ಆಗಲೇ ಸ್ತ್ರೀ, ಪುರುಷ, ಯುವಕ, ವೃದ್ಧರೆಲ್ಲರೂ ಅವನ ಕಡೆಗೆ ನೋಡಿ ನಗಲಾರಂಭಿಸಿ ದರು. ಆ ಯಾತ್ರಿಕನು ಅವರು ನಗುವ ಕಾರಣವನ್ನು ತಿಳಿಯಲಿಲ್ಲ. ಆದುದರಿಂದ ತನಗೆತಾನೇ ಯೋಚಿಸತೊಡಗಿದನು. ಆದರೆ ಅವನಿಗೆ ಅವರಲ್ಲಿಯ ಒಂದು ಕ್ರಮ ನೋಡಿ ಬಹಳ ಆಶ್ಚರ್ಯವಾಯಿತು. ಅಲ್ಲಿ ಎಷ್ಟು ಜನರು ಸೇರಿದ್ದರೋ, ಅವರೆಲ್ಲರ ಕುತ್ತಿಗೆಯಲ್ಲೂ "ಘೇಘ" ಎಂಬದೊಂದು ಮಾಲಿಕೆಯು ಇತ್ತು ಎಂಬದನ್ನು ಅವನು ನೋಡಿದನು. ಮಹಾರೂಪವತಿಯರಾದ ಸ್ತ್ರೀಯರೂ, ಬಹಳ ಸುಂದರರಾದ ಯುವ ಕರೂ ಎಲ್ಲರೂ ಈ ಅದ್ಭುತ ಮಾಂಸಪಿಂಡದಿಂದ ಶೋಭಿತರಾಗಿದ್ದರು. ಆಗ ಯಾತ್ರಿಯು ಯೋಚಿಸಿದ್ದೇನಂದರೆ—ಇವರೆಲ್ಲಾ ನನ್ನ ಕುತ್ತಿಗೆ ಯಲ್ಲಿ "ಘೇಘ" ಕಾಣದಿರುವ ಕಾರಣ ನಗುತ್ತಾರಾಗಿರಬಹುದು.

ಅರ್ಥಾತ್ ಮಾತು ಒಂದಾಗಿದ್ದರೂ ರುಚಿ ಎಲ್ಲರಿಗೂ ಒಂದಾಗಿರು ವುದಿಲ್ಲ. ನೀವು ಯಾರನ್ನು ಕಪ್ಪುಭೂತವೆಂದು ಹೇಳುತ್ತೀರೋ, ನನ್ನ ನೇತ್ರಗಳಿಗೆ ಒಂದು ವೇಳೆ ಅವಳೇ ಇಂದ್ರಲೋಕದ ಅಪ್ಸರೆಯೆಂದು ತಿಳಿಯಬಹುದು. ಮತ್ತು ಯಾರನ್ನು ನೀವು ಮಹಾರೂಪವತಿ ಎಂದೂ ಬಿಳಿ ಎಂದೂ ಹೇಳುತ್ತೀರೋ, ಅವಳ ಸ್ವರೂಪದಲ್ಲಿ ಯಾರಾದರೂ ಎರಡನೇಯವರು ಒಂದಲ್ಲ ಅನೇಕ ದೋಷಗಳನ್ನು ನೋಡಿದರೆ ಏನು ತಿಳಿಯುವುದು? ಅವಳ ಮೂಗು ಸಣ್ಣ, ಕಣ್ಣು ಚಿಕ್ಕದು, ಮೊಂಡು ದೇಹ, ಕೈಕಾಲುಗಳು ಉದ್ದುದ್ದ ಎಂದು ತಿಳಿದರೆ ಏನು ಮಾಡುವುದು? ಆದುದರಿಂದ ಸುಂದರತೆಗೊಂದು ನಿಶ್ಚಿತವಾದ ಪರಿಭಾಷೆಯೇ ಇರುವುದಿಲ್ಲ. ಯಾರ ದೃಷ್ಟಿಗೆ ಯಾರು ಸೇರುತ್ತಾರೋ, ಅವರಿಗೆ ಅವರೇ ಸುಂದರರು.

ಈ ಮಾತು ನಿಜವು. ಬಹಳ ನಿಜವು. ಬಾಹ್ಯ ಸುಂದರತ್ವಕ್ಕೆ ಯಾವ ನಿಶ್ಚಿತ ಪರಿಭಾಷೆಯು ಯಾವ ವಿಧದಲ್ಲಿಯೂ ಆಗಲಾರದು. ಕೃಪಾಳುವಾದ ಜಗದೀಶ್ವರನು ನಮ್ಮ ಪ್ರಕೃತಿಯಲ್ಲಿ ಯಾರು ಯಾರನ್ನು ಅಪೇಕ್ಷಿಸುತ್ತಾರೆಯೋ, ಅವರು ಅವರನ್ನೇ ಸುಂದರರೆಂದು ತಿಳಿಯುವ

ಗುಣವನ್ನು ತಿಳಿದೇ ಕೊಟ್ಟಿರುತ್ತಾನೆ. ವಾಸ್ತವವಾಗಿ ಬೇಕಾದರೆ ಅವರು ಸುಂದರರಾಗಲಿ, ಅಥವಾ ಕುರೂಪಿಗಳಾಗಲಿ, ಅವರ ಬಾಹ್ಯಸುಂದರತೆಯೂ, ಥಳಕು, ಪಳಕು, ಯಾವಾಗಲೂ ಮೋಸದ ಕುಂಜವಾಗಿರುತ್ತದೆ. ನಿಜವಾದ ಸುಂದರತೆಯು ಅಂತರ್ಗತವಾಗಿರುತ್ತದೆ. ಯಾವಳಾದರೂ ಮಹಾ ರೂಪವತಿಯಾದ ಸ್ತ್ರೀಯು ತನ್ನ ಬಾಹ್ಯ ಸ್ವರೂಪದ ಅಹಂಕಾರದಿಂದ ಯಾರಲ್ಲಿಯೂ ಬೇಕಾದರೆ ಮಾತಾಡದಿರಲಿ; ಆದರೆ ಅವಳ ಬಾಹ್ಯ ಶರೀರವು ಸುಂದರವಾಗಿದ್ದರೂ, ಮನಸ್ಸು ಮಹಾ ಮಲಿನವಾಗಿರುತ್ತದೆ. ಮತ್ತು ಇದೇ ಅವಗುಣದ ಕಾರಣದಿಂದ ಅವಳ ಸ್ವರೂಪವು "ಮಣಿನಾ ಭೂಷಿತಃ ಸರ್ಪಃ" ಮಣಿಯಿಂದ ಭೂಷಿತವಾದ ಮಹಾಸರ್ಪದಂತೆ ಬಹಳ ಭಯಂಕರವಾಗಿ ತಿಳಿಯಲ್ಪಡುತ್ತದೆ.

ಆದುದರಿಂದ ಹೇ ರೂಪವತಿಯರಾದ ಭಗಿನೀಮಣಿಗಳಿರಾ! ನೀವು ರೂಪದ ಅಹಂಕಾರವನ್ನು ತಾಳಬೇಡಿರಿ. ನಿಮ್ಮ ಆಂತರಿಕ ರೂಪವು ಜಗತ್ತನ್ನು ಮೋಹಿಸಲು ಅಸಮರ್ಥವಾಗಿದ್ದಲ್ಲಿ ನೀವು ದೇವಿಯರಲ್ಲ, ದಾನವಿಯರೆಂದು ತಿಳಿಯಲ್ಪಡಬೇಕಾದೀತು. ಯಾರು ಬಾಹ್ಯ ಸುಂದರತೆಯ ಆಶೆಯ ದೃಷ್ಟಿಯಿಂದ ಸುಂದರರೆಂದು ತಿಳಿಯುತ್ತಾರೋ, ಅವರು ದೀಪ ಶಿಖೆಯಲ್ಲಿ ಸುಟ್ಟು ಸಾಯುವ ಕ್ರಿಮಿ(ಪತಂಗ)ಗಳಂತೆ ಬುದ್ಧಿಹೀನರೇ ಸರಿ. ಕಡೆಗೆ ಅವರಿಗೆ ಇಡೀ ಜನ್ಮವೆಲ್ಲಾ ವ್ಯಸನದ ಬೆಂಕಿ (ಚಿಂತಾಗ್ನಿ)ಯಲ್ಲಿ ಸುಟ್ಟು ಸುಟ್ಟು ಹೊರಳಿ ಹೊರಳಿ ಸಾಯಬೇಕಾಗುವುದು.



## ಭೂಷಣಭಾವನಾ.

ಪುರುಷನ ದೃಷ್ಟಿಗೆ ಸ್ತ್ರೀಮೂರ್ತಿಯು ಬಹಳ ಮನೋಹಾರಿಣಿಯಾಗಿ ಕಾಣಬರುತ್ತದೆ. ಮತ್ತು ಸ್ತ್ರೀಯ ದೃಷ್ಟಿಗೆ ಪುರುಷನು ಬಹಳ ಮನೋಹರನಾಗಿರುತ್ತಾನೆ. ಇದೇ ದೈವೀ ಮಾಯೆಯು. ಈ ಮಾಯೆಯಿಂದಲೇ ಸ್ತ್ರೀಪುರುಷರು ಪರಸ್ಪರ ಅನುರಕ್ತರಾಗಿ ಮೋಹಿತರಾಗು

ತ್ತಾರೆ. ಇಂದಿನಿಂದ ಅಲ್ಲ, ಸನಾತನ ಕಾಲದಿಂದಲೂ ಆದಿ ಪುರುಷ ಮತ್ತು ಆದಿ ಸ್ತ್ರೀಗೂ ಇದೇ ನಿಯಮವಿರಬಹುದಿತ್ತು. ಸ್ತ್ರೀಯು ಪ್ರಿಯಳಾಗಿಲ್ಲದಿದ್ದರೆ ಪುರುಷನಿಗೆ ಈ ಸಂಸಾರ ಕಲಹದಿಂದ ಏನು ಲಾಭವಿತ್ತು? ನಿತ್ಯದ ರಗಳೆಯಲ್ಲಿ ಅವನು ಏಕೆ ಸಿಕ್ಕಿಬೀಳುತ್ತಿದ್ದನು? ಅವನಿಗೆ ಅನಾದಿ ಕಾಲದಿಂದಲೂ ಯಾವಾಗ ಮನೆಬಾಗಲಿರಲಿಲ್ಲವೋ, ಫಲ ಪುಷ್ಪಗಳಿಂದ ತುಂಬಿ ಮಧುರವಾದ ಪಕ್ಷಿಗಳ ಶಬ್ದದಿಂದ ಪ್ರತಿಧ್ವನಿಸುವ ಕಾಡುಪರ್ವತಗಳಲ್ಲಿ ಅವನು ಏಕೆ ಇರುತ್ತಿದ್ದನು? ಯಾವಾಗ ಹೊಟ್ಟೆತುಂಬಿಸಲೋಸುಗ ಬೆಳಗ್ಗಿನಿಂದ ಸಾಯಂಕಾಲದ ವರೆಗೂ ಅಲ್ಲ, ಒಂದೊಂದು ಸಲ ಅರ್ಧರಾತ್ರಿಯ ವರೆಗೂ ದುಡಿದು ತಮ್ಮ ಜಾತಿಯವರನೆಚ್ಚಳಿಕೆಯು ಮಾಡಲ್ಪಡುವ ಆವಶ್ಯಕವು ಬೀಳುತ್ತಿರಲಿಲ್ಲವೋ, ಯಾವಾಗ ಮನೋಹರವಾದ ಸುಗಂಧಪುಷ್ಪಗಳನ್ನು ನೋಡಿ ನೋಡಿ ಅವರ ಮನಸ್ಸು ಆನಂದಲಹರಿಗಳಲ್ಲಿ ನರ್ತಿಸುತ್ತಿದ್ದವೋ, ಯಾವಾಗ ಸಂಸಾರವೆಲ್ಲಾ ಅವರಿಗೋಸ್ಕರ ಆನಂದಕಾನನವಾಗಿತ್ತೋ, ಆ ಕಾಲದಿಂದಲೂ ವನ-ಉಪವನಗಳು ಫಲ-ಪುಷ್ಪಗಳಿಂದ ಸುಸಜ್ಜಿತವಾಗಿರುವುದನ್ನು ನೋಡಿ ಅವರ ಮನಸ್ಸಿನಲ್ಲಿ ತಮ್ಮ ಪ್ರಿಯೆಯರನ್ನು ಈ ಪುಷ್ಪಾದಿಗಳಿಂದ ಅಲಂಕರಿಸಿ ಪ್ರೀತಿಯನ್ನು ಪ್ರೀತಿಯಿಂದಲೂ ಮಧುರವನ್ನು ಮಧುರದಿಂದಲೂ ಜೋಡಿಸುವ ಇಚ್ಛೆಯು ಸ್ವಾಭಾವಿಕವಾಗಿತ್ತು. ಅವರು ಪುಷ್ಪಗಳನ್ನು ಕೊಯ್ದುಕೊಂಡು ತಮ್ಮ ಪ್ರಿಯೆಯರ ವೇಣಿಯಲ್ಲಿಯೂ ಕರ್ಣದಲ್ಲಿಯೂ ಇಡಲಾರಂಭಿಸಿದರು. ಇಷ್ಟರಲ್ಲಿಯೇ ತೃಪ್ತರಾಗದೆ ಹಾರ ಮಾಡಿ ಅವರ ಕಂಠದಲ್ಲಿ ಅಲಂಕರಿಸಿದರು. ಇದರಿಂದಲೂ ತೃಪ್ತರಾಗಲಿಲ್ಲ. ಈ ಪುಷ್ಪಗಳ ಸಮಾಗಮದಿಂದ ಪ್ರಿಯೆಯು ಮತ್ತು ಪ್ರಿಯಳಾಗಿ ತೋರುವಳು. ಒಳ್ಳೇದು, ಮತ್ತು ಇನ್ನೆಲ್ಲಿ ಇವಳನ್ನು ಪುಷ್ಪಾಭರಣಗಳಿಂದ ಭೂಷಿತಳನ್ನಾಗಿ ಮಾಡಲಿ? ಬಾ ಪ್ರಿಯೇ! ಇಲ್ಲಿ ಕುಳಿತುಕೋ. ಮೃಣಾಲಸದೃಶವಾದ ನಿನ್ನ ಕೈಗಳನ್ನು ತೋರಿಸು. ಇದನ್ನು ತೆಗೆದುಕೋ. ನಿನಗೋಸ್ಕರ ನಾನು ಮಲ್ಲಿಗೆ ಜಾಜಿಗಳಿಂದ ಕಂಕಣವನ್ನು ಮಾಡಿರುತ್ತೇನೆ. ಇದು ನೋಡು. ಚಂಪಕದಾಮದ

ಬಾಜೂಬಂದು (ಒಂಕಿ) ನಿನ್ನ ರಟ್ಟೆಗಳಲ್ಲಿ ಎಷ್ಟು ಅಂದವಾಗಿ ಕಾಣುತ್ತದೆ. ಈ ಎರಡು ಕಮಲಗಳು ನಿನ್ನ ಕರ್ಣದ ಕೆಳಗೆ ತೂಗಾಡುವುದರಿಂದ ಎಷ್ಟು ಶೋಭೆ ಕೊಡುತ್ತದೆ. ಬಾ ಪ್ರಿಯೇ! ಈ ದಿನ ನಿನ್ನನ್ನು ಪುಷ್ಪಸಜ್ಜೆಯಿಂದ ಮನಬಂದಂತೆ ಅಲಂಕರಿಸುವೆನು. ಆಹಾ! ನೇತ್ರಗಳು ನಿನ್ನ ವಿಚಿತ್ರವಾದ ಶೋಭೆಯನ್ನು ನೋಡಿ ಸಂತುಷ್ಟ ವಾದವು. ಆಹಾ! ನಿನ್ನ ಗಲ್ಲದಿಂ ಬರುವ ಬಕುಲವಲಯದಧಿಕವಾದ ಸುಗಂಧವು ನನ್ನ ಮನಃಪ್ರಾಣಗಳಲ್ಲಿ ವಿಶೇಷತರದ ಆನಂದವನ್ನುಂಟು ಮಾಡುತ್ತದೆ. ಪ್ರಕೃತಿದೇವಿಯ ಮುಕ್ತಸಂತಾನವಾದ ನಮ್ಮ ಪೂರ್ವಜ ಅಥವಾ ಆದಿಪುರುಷರ ಮತ್ತು ನಾರಿಯರ ದೆಶೆಯೂ ಇದೇ ರೀತಿ ಇತ್ತು. ಪ್ರಕೃತಿಯನ್ನು ಪುಷ್ಪಭೂಷಣಗಳಿಂದ ಭೂಷಿತಳನ್ನಾಗಿ ಮಾಡಿ ನೋಡಿ. ದೇವ, ಅಪ್ಸರಾ, ಗಂಧರ್ವ, ಕಿನ್ನರ, ಮನುಷ್ಯಾದಿ ಎಲ್ಲರಲ್ಲಿಯೂ, ಎಲ್ಲಾ ಸ್ತ್ರೀಪುರುಷರಲ್ಲಿಯೂ ಆ ಭೂಷಣಗಳ ಆಸೆಯು ಉತ್ಪನ್ನವಾ ಯಿತು. ಪುರುಷನು ತನ್ನ ಪ್ರಿಯಳನ್ನು ಭೂಷಿತಳನ್ನಾಗಿ ಮಾಡುತ್ತಿ ದ್ದನು. ನಾರಿಯು ತನ್ನ ಹೃದಯೇಶ್ವರನಿಗೆ ಅಪೂರ್ವವಾದ ಪ್ರೇಮದ ಹಾರವನ್ನುಂಟುಮಾಡಿ ಧರಿಸುತ್ತಿದ್ದಳು. ಹೊಸ ಹೊಸ ಭಾವನೆಗಳ ಜೊತೆಗೆ ಹೊಸ ಹೊಸ ತರದ ಆ ಭೂಷಣಗಳ ಸೃಷ್ಟಿಯಾಗಲಾರಂಭ ವಾಯಿತು. ಆದರೆ ಪುರುಷನಿಗೆ ಮೆಲ್ಲಮೆಲ್ಲನೇ ಮೃಗಯಾ (ಬೇಟೆ) ವಿಹಾರಾದಿಗಳಲ್ಲಿ ಬಹಳ ವೀರರಸದ, ಸಾಹಸದ, ಬಿಸಿಲಿನ ಓಟದ ಕೆಲಸ ಗಳಲ್ಲಿ ಬೀಳಬೇಕಾಯಿತು. ಈ ಕಾರಣದಿಂದ ಭೋಗವಿಲಾಸದ ಸಮ ಯವನ್ನು ಬಿಟ್ಟು ಅವರಿಗೋಸ್ಕರ ಭೂಷಣಗಳಿಂದ ಭೂಷಿತರಾಗಿರುವುದು ಅಸಂಭವವಾಗಿಹೋಯಿತು. ರೂಪವತಿಯಾದ ನಾರಿಯು ಭಾಗ್ಯದಲ್ಲಿ ಮಾತ್ರವೇ ವಿಲಾಸಸಜ್ಜೆಯುಳಿಯಿತು. ಅವಳ ಪ್ರಾಣೇಶ್ವರನು ಅವ ಳನ್ನು ಈ ಸಜ್ಜೆಯಲ್ಲಿ ನೋಡಿಯೇ ಸಂತೋಷಿಸುತ್ತಿದ್ದನು. ತನ್ನ ದೈವಿಕ ಉದ್ಯೋಗಗಳಿಂದ ಕಷ್ಟಪಟ್ಟು ಮನೆಗೆ ಹಿಂತಿರುಗಿ ಯಾವಾಗ ತನ್ನ ಅಲೌಕಿಕ ರೂಪಲಾವಣ್ಯವತಿಯೂ ಮಧುರಭಾಷಿಣಿಯೂ ಆದ ಪ್ರಿಯ ಳನ್ನು ವಸ್ತ್ರಾಲಂಕಾರಗಳಿಂದ ಸುಸಜ್ಜಿತಳನ್ನಾಗಿ ನೋಡಿದಾಗ ತನ್ನ

ಎಲ್ಲಾ ಕಷ್ಟವನ್ನು ಮರೆಯುತ್ತಾನೆ. ಅಲ್ಲದೆ, ಅವನ ಶರೀರದಲ್ಲಿ ಹೊಸತರದ ಬಲ ಸಂಚಾರವಾಗುತ್ತದೆ. ಆಯಿತು, ಇಲ್ಲಿಂದಲೇ ಭೂಷಣದ ಸೃಷ್ಟಿಯಾಯಿತು. ಬರಬರುತ್ತಾ ಮನುಷ್ಯರು ಸಭ್ಯರಾದರು. ಸಮಾಜವಾಯಿತು. ಬ್ರಹ್ಮ-ಕ್ಷತ್ರಿಯಾದಿ ವರ್ಣವಾಯಿತು. ಬ್ರಾಹ್ಮಣ ಕನ್ಯೆಯರು ಈ ವರಿವಿಗೂ ವನಮಾಲೆ ಮತ್ತು ವಲ್ಕಲಗಳಿಂದಲೇ ಸಂತೋಷಿಸುತ್ತಿದ್ದರು. ಆದರೆ ಕ್ಷತ್ರಿಯ ಲಲನೆಯರೂ, ರಾಜನ ರಾಣಿಯರೂ, ವೈಶ್ಯಪತ್ನಿಯರೂ, ಸಾಹುಕಾರಪತ್ನಿಯರೂ, ಧನಕುಬೇರರ ಪತ್ನಿಯರೂ ಇವರೇ ಮೊದಲಾದವರಿಗೋಸ್ಕರ ಹೊಸ ಹೊಸ ಮಾದರಿಯಾಗಲಾರಂಭವಾಯಿತು. ಕರ್ಣದಲ್ಲಿ ಕಮಲಗಳ ಸ್ಥಾನಕ್ಕೆ ಸ್ವರ್ಣಕಮಲಗಳು ತೂಗಾಡಲಾರಂಭಿಸಿದವು. (ಈಗ ಮುತ್ತು, ಕೆಂಪು, ವಜ್ರ ಮೊದಲಾದವುಗಳು.) ಕೈಗಳಲ್ಲಿ ಜಾಜಿ ಮಲ್ಲಿಗೆಗಳ ಕಂಕಣ ಸ್ಥಾನದಲ್ಲಿ ಸ್ವರ್ಣಕಂಕಣಗಳು ಶೋಭಿಸುವವು. (ಈಗ ಅನೇಕವಿಧವಾದ ಬಳೆಗಳು.) ಕಂಠದಲ್ಲಿ ಸ್ವರ್ಣ, ಮುತ್ತು, ರತ್ನ, ವೈಢೂರ್ಯಾದಿಗಳ ಹಾರಗಳು ಪ್ರಕಾಶಿಸಲಾರಂಭಿಸಿದವು. ಶರೀರದ ಬೇರೆ ಬೇರೆ ಅಂಗಗಳಿಗೆ ಮನುಷ್ಯನ ಭಾವನಾಶಕ್ತಿಯ ಉನ್ನತಿಯ ಜೊತೆಯಲ್ಲಿ ಹೊಸ ಹೊಸ ತರದ ಆ ಭೂಷಣಗಳ ಆವಿಷ್ಕಾರವಾಗಲಾರಂಭವಾಯಿತು. ವಲ್ಕಲವಸ್ತ್ರದ ಸ್ಥಾನವನ್ನು ಸೂಕ್ಷ್ಮವಾದ ರೇಶ್ಮೆ ಪೀತಾಂಬರವು ಅಪಹರಿಸಿತು. ಇದೇ ರೀತಿ ವಿಲಾಸವು ಹೆಚ್ಚಲಾರಂಭವಾಯಿತು. ಕಪ್ಪು ಹರಿಣಗಳ ಚರ್ಮಗಳೂ ವಲ್ಕಲವಸ್ತ್ರಗಳೂ ಸಾತ್ವಿಕರ ಭಾಗಕ್ಕೆ ಮಾತ್ರವೇ ಉಳಿದವು. ದೇವತೆಗಳ ಪೂಜೆಯು ಪುಷ್ಪಭೂಷಣಗಳಿಂದಲೇ ಆಗುತ್ತಿತ್ತು. ಆದರೆ ರಾಜರಂತಹ ವ್ಯಕ್ತಿಗಳು, ರಾಜರಂತಹ ನಡೆ ನುಡಿಯಲ್ಲಿಯೇ ಇರಲಾರಂಭಿಸಿದರು. ಭೂಷಣಗಳ ಆದಿಸೃಷ್ಟಿಯು ಮೊದಲು ಸಾತ್ವಿಕವೃತ್ತಿಯನ್ನು ಹೆಚ್ಚಿಸುವ ಸುಗಂಧವಾದ ಪುಷ್ಪಗಳಿಂದಲೇ ಉಂಟಾಯಿತು. ಬರಬರುತ್ತಾ ಸಮಯ ನೋಡಿ ಅದೇ ಭೂಷಣಗಳು ಸ್ವರ್ಣ, ರತ್ನಾದಿಗಳಿಗೆ ರೂಪಾಂತರಿತವಾಗಿ ನಿಕೃಷ್ಟವೃತ್ತಿಯನ್ನು ಪೂರ್ಣಮಾಡುವುದರಲ್ಲಿ ಸಹಾಯವಾಯಿತು. ಆದಕಾರಣ ಭೂಷಣಗಳ ನಿಜವಾದ ಉದ್ದೇಶವು ಈ ಸಮಯದ ಶೃಂಗಾರರಸವನ್ನು ಚರಿತಾರ್ಥಮಾಡುವುದೇ ಆಗಿದೆ.

ಈಗಲೂ ಅಸ್ಸಾಮಿನ ಕಾಡುಪ್ರದೇಶದಲ್ಲಿರುವ ಬಾಲಿಕೆಯರು ತಮ್ಮ ಸುಂದರ ಶರೀರವನ್ನು ವನಕುಸುಮಗಳಿಂದಲೇ ಭೂಷಿಸಿಕೊಳ್ಳು ತ್ತಾರೆ. ಬೆಳ್ಳಿ-ಭಂಗಾರದ ಆವಶ್ಯಕತೆಯೇ ಅವರಿಗೆ ಇರುವುದಿಲ್ಲ.

ಆದರೆ ಈ ಭೂಷಣಪ್ರೀತಿಯು ಪ್ಲೇಗಿನಂತೆ ಎಲ್ಲಾ ಸಂಸಾರ ದಲ್ಲಿಯೂ ಸಾಂಕ್ರಾಮಿಕವಾಗಿ ಹರಡಿಹೋಯಿತು. ಕೆಲವು ಕಡೆ ಇದರ ಪ್ರಭಾವವು ಹೆಚ್ಚು, ಕೆಲವು ಕಡೆ ಕಡಿಮೆ. ಬಹಳವಾಗಿ ಸ್ತ್ರೀಯರು ಮತ್ತು ಸ್ತ್ರೀಯರಿಂದಲೂ ಅಧಿಕ ಅಧಮ ದೇಶೀ ರಾಜ ಮಹಾರಾಜರು ಈ ರೋಗ ಹಿಡಿದವರೆಂದು ತಿಳಿದುಬರುತ್ತದೆ. ಜನರ ರುಚಿಯಾ ದರೂ ಬಹಳ ವಿಚಿತ್ರವಾಗಿದೆ. ಪಂಜಾಬಿ, ಬಂಗಾಲಿ, ಗುಜರಾತಿ, ಮದ್ರಾಸ್, ಉತ್ತರ, ದಕ್ಷಿಣ, ಮೊದಲಾದ ಎಲ್ಲಾ ದೇಶದ ಎಲ್ಲಾ ಜಾತಿಯ ಸ್ತ್ರೀಯರನ್ನು ಆಮಂತ್ರಣ ಕೊಟ್ಟು ಕರೆಯಿಸಿ ಒಂದು "ಮಹಿಳಾ ಭೂಷಣ ಪರಿಷತ್" ಎಂದು ಸ್ಥಾಪಿಸಿದರೆ ಈ ಸಮಯದಲ್ಲಿ ಬಹಳ ಆವಶ್ಯಕ ಬಿದ್ದೀತೆಂದು ಕಾಣುತ್ತದೆ. ಯಾವಳಾದರೂ ಭೂಷಣತತ್ವದ ವಿದುಷೀ ಸುಂದರಿಯು ಈ ಕೆಲಸಕ್ಕೆ ಪ್ರಯತ್ನಮಾಡಬೇಕು. ಎಲ್ಲಾ ಕಡೆಯ ಭೂಷಿತಾಂಗಿಯರನ್ನು ಒಂದೇ ಕಡೆ ನೋಡಿ ಇವರ ರುಚಿಭೇದವು ಫಕ್ಕನೇ ಕಂಡುಬರುವುದು. ಕೆಲವರು ಸೂಕ್ಷ್ಮವಾದ ಸ್ವರ್ಣತಂತಿಗ ಳಿಂದ ಮಾಡಿದ ಭೂಷಣಗಳ ಹೊರೆಯಿಂದ ತುಂಬಿದವರಾಗಿರುವದು ಕಂಡುಬರುವುದು. (ದ. ಕ.) ಮತ್ತೆ ಕೆಲವರು ಐದ್ಕೈದು ಸೇರಿನ ಕಾಲು ಬಳೆಗಳನ್ನು ಧರಿಸಿಕೊಂಡು ಬಹಳ ಕಷ್ಟದಿಂದ ಕಾಲೆತ್ತಿ ಇಡುವುದು ಕಂಡುಬರುವುದು. (ಮಾರ್ವಾಡಿ) ಕೆಲವರ ಕಾಲುಗಳಲ್ಲಿ ಛಲ್ ಛಲ್ ಎಂದು ಶಬ್ದ ಮಾಡುತ್ತಿರುವ ಹಲವು ಬಳೆಗಳು ಇರುವವು. (ಹಿಂದುಸ್ತಾನೀ, ಕ್ಷತ್ರಿ) ಕೆಲವರ ಕಿವಿಗಳು ಬಹಳ ಭಾರವಾದ ಹೊರೆಯನ್ನು ಹೊತ್ತಿರು ವುದರಿಂದ ಕಿವಿಗಳು ಕೆಳಗಿನ (ಭುಜದ) ವರೆಗೂ ಜೋಲುತ್ತಿರುತ್ತವೆ. (ಮಲಯಾಳ) ರಾಜಾ "ಅಜ"ನ ರಾಣಿಯಾದ ಇಂದುಮತಿಯು ಕೇವಲ ಒಂದು ಪುಷ್ಪಹಾರದ ಪೆಟ್ಟಿನಿಂದಲೇ ಪ್ರಾಣವನ್ನು ತ್ಯಜಿಸಿದ್ದಳು. ಆದರೆ ಈ ಕಾಲದ ಸುಂದರ ಸ್ತ್ರೀಯರು ಕೆಲವರು ಭಂಗಾರದಿಂದಾಚ್ಛಾದಿತವಾದ

ಕಲ್ಲನ್ನಾದರೂ ಕುತ್ತಿಗೆಯಲ್ಲಿ ಹೊತ್ತುಕೊಂಡು ತಿರುಗಲು ಹಿಂಜರಿಯು ಲಾರರು.

ಒಂದು ನಿಜವಾದ ಕಥೆಯನ್ನು ಕೇಳಿರಿ. ಒಂದು ಸಲ ಅಲಹಾ ಬಾದಿನಿಂದ ಜೌನ್‌ಪೂರ್, ಗೋರಖ್‌ಪೂರ್, ಛಪರಾ, ಮುಜಫ್ಫರ್ ಪೂರ್, ದರ್ಭಂಗಾ ಮೊದಲಾದ ದೇಶವನ್ನು ಸುತ್ತಿಕೊಂಡು ಖಶ್ಕೀಯ ದಾರಿಯಲ್ಲಿ—ರೈಲಿನಲ್ಲಿ ಅಲ್ಲ—ಮತ್ತು ಆಗ ಈ ಕಡೆ ಎಲ್ಲೆಲ್ಲಿಯೂ ರೈಲು ಆಗಲೇ ಇಲ್ಲ—ಕಾಲುನಡೆಯಿಂದಲೇ ಹೋಗುತ್ತಾ ನಾನು ಮುಂಗೇರ್‌ನ ವರೆಗೂ ಹೋಗಿದ್ದೆನು. ಏತಕ್ಕೋಸ್ಕರ ನಾನು ಕಾಲುನಡೆ ಯಿಂದಲೇ ಇಷ್ಟು ದೊಡ್ಡ ಯಾತ್ರೆಯನ್ನು ಮಾಡಿದೆನೆಂದು ಹೇಳುವುದು ಈಗ ಇಲ್ಲಿ ಆವಶ್ಯಕವಿಲ್ಲ. ಆದರೆ ಈ ಯಾತ್ರೆಯಲ್ಲಿ ನನಗೆ ಈ ಪ್ರಾಂತ್ಯಗಳ ನಿವಾಸಿಯರ ಸ್ಥಿತಿಯು ಚೆನ್ನಾಗಿ ದಿಗ್ದರ್ಶನವಾಗಿಹೋಯಿತು. ವಿಶೇಷ ರೀತಿಯಿಂದ ಭಾರತಮಾತೆಯರಾದ ಮಹಿಳೆಯರ ಭೂಷಣಾವಲಿಗಳ ದರ್ಶನವಾಯಿತು. ಛಪರಾ ಜಿಲ್ಲೆಯಲ್ಲಿ ಮಹಾರಾಜಗಂಜ್ ಎಂಬ ದೊಂದು ಬಹಳ ದೊಡ್ಡ ಬೀದಿ. ಒಂದು ದಿನ ಆ ಬೀದಿಯಲ್ಲಿ ನಾನು ತಿರುಗುತ್ತಿದ್ದೆನು. ಆಗ ಒಂದು ಕಡೆ ಒಂದಂಗಡಿಯಲ್ಲಿ ಸಾಧಾರಣ ಮೂವತ್ತು ನಾಲ್ವತ್ತು ಜನರ ಸಂದಣಿಯನ್ನು ನೋಡಿದೆನು. ಆ ಸಂದ ಣಿಯೊಳಗೆ ನುಗ್ಗಿದರೂ ಕೂಡ ಅಲ್ಲಿ ಏನಾಗುತ್ತಿದೆ ಎಂಬವನ್ನು ನಾನು ಮೊದಲು ನೋಡಲು ಶಕ್ತನಾಗಲಿಲ್ಲ. ಆಗ ನಾನು "ಇಲ್ಲಿ ಏನಾಗು ತ್ತಿದೆ? ಇವಳು ಯಾಕೆ ಅಳುತ್ತಾಳೆ?" ಎಂದು ಪ್ರಶ್ನಿಸಿದೆನು. ಆಗ ಒಬ್ಬ ಮನುಷ್ಯನು ಇದು ಅಕ್ಕಸಾಲೆಯ ಅಂಗಡಿ, ಇಲ್ಲಿ ಒಬ್ಬಳು ಕಾಲಿಗೆ "ಪೈರೀ"ಯನ್ನು ತೊಡುತ್ತಿದ್ದಾಳೆ ಎಂದು ಹೇಳಿದನು. ಅದಕ್ಕೆ ನಾನು "ಪೈರೀ" ಎಂದರೇನು ಎಂದು ಕೇಳಿದೆನು. ಅದಕ್ಕೆ ಆತನು ಒಂಭತ್ತು ಇಂಚು ನಲ್ವತ್ತೆರಡು ಭರಿ (ಭರಿಗೆ ಒಂದುಕಾಲು ರೂಪಾಯಿ ತೂಕ) ಎತ್ತರದ ಕಂಚಿನ ಒಂದುವಿಧವಾದ ಚರಣಾಭರಣದ ಹೆಸರು "ಪೈರಿ" ಎಂದನು. ಇಷ್ಟು ಭಾರ ಮತ್ತು ಎತ್ತರವಾದ ಪೈರಿಯನ್ನು ಕಾಲಿಗೆ ಹಾಕುವ ಸಮಯದಲ್ಲಿ ಕಾಲಿನ ಪಾದದ ಮಣಿಗಂಟಿನ ಜೊತೆಗೆ ಘನ

ಘೋರವಾದ ಯುದ್ಧವಾಗುತ್ತದೆ. ಪಾಪ! ಆ ಸ್ತ್ರೀಯ ಮಣಿಗಂಟಿನಲ್ಲಿ ಘಾಯವಾಗಿ ರಕ್ತವಾಗಿತ್ತು. ಯಾವ ಸ್ತ್ರೀಯ ದೆಶೆಯನ್ನು ನಾನು ಬರೆಯುತ್ತಿದ್ದೇನೆಯೋ, ಅವಳನ್ನು ನೋಡಲೋಸುಗ ಆ ಜನ ಸಂದಣಿಯಲ್ಲಿ ನುಗ್ಗಿಕೊಂಡು ಹೋದೆನು. ಅದ್ಭುತವಾದ ದೃಶ್ಯವಾಗಿತ್ತು. ಐದಾರು ಜನರು ಆ ಸ್ತ್ರೀಯನ್ನು ಭೂಮಿಯಲ್ಲಿ ಮಲಗಿಸಿ ಒತ್ತಿಹಿಡಿದುಕೊಂಡಿದ್ದರು. ಅಕ್ಕಸಾಲೆಯು ಹುರಿಮೀಸೆಯನ್ನು ಮಾಡಿಕೊಂಡು, ಕಣ್ಣಿಗೆ ಕನ್ನಡಕ ಹಾಕಿಕೊಂಡು, ತುಪ್ಪ ಮತ್ತು ಎಣ್ಣೆಯನ್ನು ಕಾಲಿಗೆ ತಿಕ್ಕಿಕೊಂಡು ಪೈರಿಯನ್ನು ತೊಡಿಸುವುದರಲ್ಲಿಯೇ ದತ್ತಚಿತ್ತನಾಗಿದ್ದನು. ಅಕಟಕಟಾ! ಭೂಷಣ ಲಾಲಸೆಯೇ, ಇಷ್ಟು ಕಷ್ಟದಿಂದಲಾದರೂ ಪೈರಿಯನ್ನು ತೊಡಲೇಬೇಕು. ಎಷ್ಟೋ ಜನ ಸ್ತ್ರೀಯರು ಈ ವಿಚಿತ್ರವಾದ ಭೂಷಣದಿಂದ ಭೂಷಿತರಾದಮೇಲೆ ತಮ್ಮ ಕಾಲುಗಳಿಗೆ ಬಟ್ಟೆಯನ್ನು ಸುತ್ತಿಕೊಂಡಿರುವುದನ್ನು ನಾನು ನೋಡಿದ್ದೇನೆ. ಈ ಭೂಷಣವು ಎರಡು ಎರಡೂವರೆ ಸೇರು (ಸೇರು 1ಕ್ಕೆ 80 ರೂಪಾಯಿ ತೂಕ) ಭಾರವಿರುತ್ತದೆ. ಬಿಹಾರದ ನೀಚಜಾತಿಯ ಸ್ತ್ರೀಯರೇ ಇದನ್ನು ತೊಡುತ್ತಾರೆ. ಆದರೂ ಅವರಿಗೆ ಗರ್ವವೇನೂ ಕಡಿಮೆಯಾಗಿರುವುದಿಲ್ಲ. ಹೌದು, ಒಂದು ಮಾತು. ಈ ಕಲ್ಪನೆಯು ಪುರುಷರಿಗೇ ಆಗುವುದೆಂದು ತಿಳಿಯೋಣ. ಸ್ತ್ರೀಯರ ನಡೆಯನ್ನು ಕವಿಗಳು ಹಂಸ ಮತ್ತು ಹಸ್ತಿಗೆ ಜೋಡಿಸಿದ್ದಾರೆ. ಪೈರಿಯಿಂದ ಭೂಷಿತರಾದ ಗ್ರಾಮ್ಯ ಸುಂದರಿಯರು ನಿಃಸಂದೇಹವಾಗಿಯೂ ಗಜೇಂದ್ರಗಾಮಿನಿಯರಾಗಬಹುದು. ದೊಡ್ಡ ಮನೆತನದ ಸ್ತ್ರೀಯರು ಬ್ರಾಹ್ಮಣ, ಕ್ಷತ್ರಿಯರಾದಿಯಾಗಿ ಎಲ್ಲಾ ಸ್ತ್ರೀಯರೂ (ಉತ್ತರಹಿಂದುಸ್ಥಾನದಲ್ಲಿ) ದೊಡ್ಡ ದೊಡ್ಡದಪ್ಪವಾದ ಕಾಲುಕಡಗವನ್ನು ಧರಿಸುತ್ತಾರೆ. ನಾನು ಇದುವರೆಗೂ ನೋಡಲಿಲ್ಲ. ಆದರೂ ಆಲೋಚಿಸಿ ನೋಡುವಾಗ ಆ ಭದ್ರಮುಖಿಯರು ಯಾರಲ್ಲಾದರೂ ಸ್ವಲ್ಪ ಸಿಟ್ಟಾಗಿ ಒಂದು ಸಲ ಒದ್ದುಬಿಟ್ಟರೆ ಇನ್ನೇನೂ ಆಗಲಾರದಿದ್ದರೂ ಅವಶ್ಯವಾಗಿ ಮೂರ್ಛಿತರಾಗುವರು. ಗುಜರಾತಿನ ರಮಣಿಯರ ಆ ಭೂಷಣವಾದರೂ ಬಹಳ ಭದ್ರವಾಗಿರುತ್ತದೆ.

ಎಲ್ಲಿಯೋ ಒಂದುಕಡೆ ಯಾವಳೋ ಕನ್ಯೆಯ ವಿವಾಹಕಾಲದಲ್ಲಿ ವರನ ದರ್ಶನಮಾಡಿ ತಿಲಕವನ್ನು ಹಚ್ಚುವ ಸಮಯದಲ್ಲಿ ಅಸಾವಧಾನದಿಂದ ಕೈ ಸ್ವಲ್ಪ ಜೋರಾಗಿ ಎತ್ತುವಾಗ ಕೈಯಲ್ಲಿದ್ದ ಕಂಕಣವು ತಲೆಯ ಮೇಲೆ ತಾಗಿ ವರನು ಅಚೇತನನಾಗಿ ಭೂಮಿಗೆ ಬಿದ್ದುಬಿಟ್ಟನೆಂದು ಕೇಳಿರುತ್ತೇನೆ.

ಎಲ್ಲಿ ಶಿಕ್ಷಣವು ಕಡಮೆಯಾಗಿರುತ್ತದೋ, ಅಲ್ಲಿ ವಸ್ತ್ರ, ಆಭರಣ, ಭೋಜನ ಇತ್ಯಾದಿ ಮಾತ್ರವಲ್ಲ, ಹೆಸರೂ ಕೂಡ ಸುಂದರವಾಗದೆ ಅವಾಚ್ಯವಾಗಿರುತ್ತದೆ. ಆದರೆ ಸುಶಿಕ್ಷಿತ ಸ್ತ್ರೀಯರಾದರೂ ಬೇರೆ ವಿಧದಲ್ಲಿಯೇ ಮೋಸಹೋಗುತ್ತಾರೆ. ಸೂಕ್ಷ್ಮತೆಯ ಕಡೆಗೆ ಅಧಿಕ ದೃಷ್ಟಿ ಇಡುವುದರಿಂದಲೂ ಮತ್ತು ಕಸೂತಿ ನಕ್ಷೆ ಮೊದಲಾದವುಗಳಲ್ಲಿ ಅಧಿಕ ಪ್ರೀತಿಯಿಂದಲೂ ಅವರ ರೂಪಾಯಿಗೆ ಹತ್ತೇ ಆಣೆ ಉಳಿಯುತ್ತದೆ. ನೂರು ರೂಪಾಯಿ ಹಾಕಿದರೆ ಅವರಿಗೆ ಅರವತ್ತು ಯಾ ಎಪ್ಪತ್ತು ರೂಪಾಯಿಗಳ ಸಾಮಾನೇ ಸಿಗುತ್ತದೆ. ಯಾಕಂದರೆ—ಸೂಕ್ಷ್ಮಕೆಲಸಕ್ಕೋಸ್ಕರ ಭಂಗಾರವನ್ನು ಕೆಡಿಸಬೇಕಾಗುತ್ತದೆ. ಇಪ್ಪತ್ತೈದು ರೂಪಾಯಿ ತೊಲೆಯ ಭಂಗಾರವು ಇಪ್ಪತ್ತು ರೂಪಾಯಿ ತೊಲೆಗೆ ನಿಲ್ಲುತ್ತದೆ. ಈಗ ದೊಡ್ಡ ದೊಡ್ಡ ಆಭರಣವು ಒಳ್ಳೇದೋ ಸೂಕ್ಷ್ಮ ಆಭರಣವು ಒಳ್ಳೇದೋ ತಿಳಿದುಕೊಳ್ಳಿ. ನನ್ನ ತಿಳುವಳಿಕೆಯಲ್ಲಿ ಈ ಎರಡು ವಿಧ ಆಭರಣಗಳೂ ನಿಷ್ಪ್ರಯೋಜನವು. ಸುಂದರತೆಯು ಭೂಷಣಗಳಿಂದುಂಟಾಗುವುದಿಲ್ಲ. ಸುಂದರತೆಯು ನಿಮ್ಮ ಮನಸ್ಸಿನೊಳಗಿದೆ. ನಿಜವಾದ ಈಶ್ವರದತ್ತವಾದ ಸುಂದರತೆಯನ್ನು ತಿಕ್ಕಿ ತೊಳೆದು ಥಳಥಳಿಸುವಂತೆ ಮಾಡಿ ತೋರಿಸಿರಿ; ಎಲ್ಲಾ ಜಗತ್ತಿನ ಕಣ್ಣು ಕುಕ್ಕಿಹೋಗುವುದು. ಅಲ್ಲದೆ, ನಿಮ್ಮ ನಾರೀಜನ್ಮವು ಸಫಲವಾಗುವುದು.

## ಭೂಷಣಪ್ರೇಮ.

ಅರ್ಜುನನು ಅಶ್ವಮೇಧ ಕುದುರೆಯನ್ನು ಬಿಟ್ಟುಕೊಂಡು ಯಾವಾಗ ದಿಗ್ವಿಜಯಕ್ಕಾಗಿ ಹೊರಟಿದ್ದನೋ, ಆಗ ಅವನು ಎಲ್ಲಿಯೋ ಒಂದುಕಡೆ

ಹೋದನು. ಅಲ್ಲಿ ಪುರುಷಮಾತ್ರನ ಹೆಸರೇ ಇರಲಿಲ್ಲ. ಯಾವ ಫಿಜೀದ್ವೀಪದಲ್ಲಿ ಇಂಗ್ಲೀಷು ಜಮೀನ್ದಾರರು ಭಾರತದ ಕುಲೀನ ಸ್ತ್ರೀ ಪುರುಷರ ಮೇಲೆ ಅಮಾನುಷ ಅತ್ಯಾಚಾರವನ್ನು ನಡೆಸುತ್ತಿದ್ದಾರೋ, ಮತ್ತು ಯಾವದರ ಕಥೆಯು ಸಮಾಚಾರಪತ್ರಗಳಲ್ಲಿ ಕಾಣಬರುತ್ತದೋ, ಅದೇ ಫಿಜೀಯ ಆಗ್ನೇಯಮೂಲೆಯಲ್ಲಿ ಅಂದರೆ ಅದಕ್ಕೆ ದಕ್ಷಿಣ ಮತ್ತು ಪೂರ್ವದ ಕಡೆ "ಮೆಲಾನೆಶಿಯಾ" ಎಂಬ ಹೆಸರಿನ ಬಹಳ ಚಿಕ್ಕ ಚಿಕ್ಕ ಹಳ್ಳಿಗಳಿರುತ್ತವೆ. ಆ ಹಳ್ಳಿಗಳ ಪೈಕಿ ಒಂದು ಹಳ್ಳಿಯಲ್ಲಿ ಈಗಲೂ ಕೂಡ ನಾರಿಯರೇ ಕಾಣಬರುತ್ತಾರೆಂದು ಯಾತ್ರಿಕರು ಹೇಳುತ್ತಾರೆ. ಪುರುಷರು ಕಾಣಬರುವುದಿಲ್ಲ. ಈ ಮಾತಿನಲ್ಲಿ ಎಷ್ಟರ ವರೆಗೆ ವಿಶ್ವಾಸವು ಬಿದ್ದಿತೆಂದರೆ—ಅಮೇರಿಕದ ಸಂಯುಕ್ತರಾಜ್ಯದವರು ಒಂದು ಸಲ ಇದರ ವಿಚಾರವನ್ನು ಚೆನ್ನಾಗಿ ತಿಳಿಯಲೋಸುಗ ಕೆಲವು ಜನರ ಒಂದು ದಳ ವನ್ನು ಕಳುಹಿಸಿದ್ದರು. ಅವರಿಗೂ ಕೇವಲ ನಾರಿಯರೇ ಸಿಕ್ಕಿದರು. ಆದರೆ ಕೆಲವು ದಿನಗಳವರಿವಿಗೂ ವಿಚಾರಿಸಿದ್ದಲ್ಲಿ ತಿಳಿದುಬಂದದ್ದೇನಂದರೆ—ಸ್ತ್ರೀಯರು ಗದ್ದೆ ಮತ್ತು ವನಗಳಲ್ಲಿ ಕೆಲಸಮಾಡುತ್ತಾರೆಂದೂ, ಪುರು ಷರು ಮೀನು ಹಿಡಿಯಲಿಕ್ಕೋಸ್ಕರ ದೋಣಿಗಳಲ್ಲಿ ಕುಳಿತುಕೊಂಡು ಸಮುದ್ರದಲ್ಲಿ ದೂರದ ವರೆಗೂ ಹೋಗುತ್ತಾರೆಂದೂ ತಿಳಿದುಬಂತು. ಈ ದ್ವೀಪನಿವಾಸಿಗಳು ವನವಾಸಿಗಳೂ, ಅಸಭ್ಯರೂ ಆಗಿರುತ್ತಾರೆ. ಅವರು ಬಹಳವಾಗಿ ನಿರ್ವಾಣರಾಗಿಯೇ ಇರುತ್ತಾರೆ. ಸ್ತ್ರೀಯರೇನು ಪುರುಷರೇನು ಎಲ್ಲರೂ ತಮ್ಮ ಸೊಂಟದಲ್ಲಿ ಕೆಲವು ಎಲೆಗಳ ಗೊಲ್ಲೆಗಳನ್ನು ಕಟ್ಟಿಕೊಂಡು ವಸ್ತ್ರವನ್ನು ಉಡುವ ಆಶೆಯನ್ನು ತೀರಿಸಿಕೊಳ್ಳುತ್ತಾರೆ.

ಇರುವುದೇನೋ ಇಂಥಾ ಕಾಡುಮನುಷ್ಯರಂತೆ. ಆದರೂ ಅವರಿಗೆ ಭೂಷಣಗಳ ಪ್ರೇಮವೇನೂ ಕಡಿಮೆಯಾಗಿರುವುದಿಲ್ಲ. ದೊಡ್ಡ ದೊಡ್ಡ ವೀರರೂ ಸರದಾರರೂ ಬಹಳವಾಗಿ ಆಭರಣಗಳನ್ನು ಧರಿಸುತ್ತಾರೆ. ಸ್ತ್ರೀಯರೂ ಕೂಡ ಈ ವಿಷಯದಲ್ಲಿ ತಮ್ಮ ಪತಿಗಳಿಗಿಂತ ಹಿಂದಾಗಲಿ ಚ್ಛೈಸುವುದಿಲ್ಲ. ಯಾವ ಸ್ತ್ರೀಯರಲ್ಲಿ ಎಷ್ಟು ಆಭರಣಗಳು ಬಹಳ ವಾಗಿ ಕಂಡುಬರುವವೋ, ಅವರ ಪತಿಯು ಅಷ್ಟೇ ಧನವಂತನೂ

ಮರ್ಯಾದಾವಂತನೂ ಎಂದು ಎಣಿಸಲ್ಪಡುತ್ತಾನೆ. ಯುವತಿಯರೂ ಕನ್ಯೆಯರೂ ಯಾವಾಗಲೂ ಕಂಠದಲ್ಲಿ ಹಾರವನ್ನೂ, ಬಾಹುಗಳಲ್ಲಿ ಬಾಜುಬಂದು(ಒಂಕಿ)ಗಳನ್ನೂ ಮತ್ತು ಕಾಲುಗಳ ಮಣಿಗಂಟಿನ ಮೇಲೆ ಯೂ ಆಭರಣಗಳನ್ನು ಧರಿಸಿರುತ್ತಾರೆ. ಕಾಲುಗಳ ಆಭರಣಗಳಿಗೆ ನಾನು ಮಣಿಗಂಟಿನ ಕಟ್ಟೆಂದು ಹೇಳಿದರೆ ತಾನೇ ದೋಷವೇನು? ಶರೀರವೆಲ್ಲಾ ನಿರ್ವಾಣ. ಲಜ್ಜೆಯ ಹೆಸರೇ ಇಲ್ಲ. ಆದರೂ ಆಭರಣಗಳು ಅವಶ್ಯವಾಗಿಯೂ ಬೇಕು. ಈ ಆಭರಣಗಳು ಬಹಳವಾಗಿ ಕವಡಿ(ಸಾರಿ)ಗಳಿಂದಲೂ (ಘೊಂಘಿ) ಮತ್ತು ಮೀನಿನ ಎಲುಬುಗಳಿಂದಲೂ ಮಾಡಲ್ಪಡುತ್ತವೆ. ನೀವುಗಳು ಇಲ್ಲಿ ಬಹು ಮೂಲ್ಯವಾದ ವಸ್ತ್ರಗಳ ಮೇಲೆಯೇ ಕಸೂತಿ-ಬುಟ್ಟಾಗಳನ್ನು ತೆಗೆಯುತ್ತೀರಿ. ಆದರೆ "ಮೆಲಾನೆಶಿಯಾ" ವಾಸಿಗಳ ಬಳಿಯಲ್ಲಿ ವಸ್ತ್ರಗಳಿಲ್ಲ. ಅದಕ್ಕೋಸ್ಕರ ಅವರು ತಮ್ಮ ಶರೀರದಲ್ಲಿಯೇ ಕಸೂತಿ-ಬುಟ್ಟಾಗಳನ್ನು ತೆಗೆದುಕೊಳ್ಳುತ್ತಾರೆ. ನಮ್ಮ ಬೀದಿಗಳಲ್ಲಿ ಎಂದಾದರೊಮ್ಮೆ "ಹಸುರು ಕೊಚ್ಚಿಕೊಳ್ಳಿ ಅಮ್ಮಾ ಹಸುರು" ಎಂದು ಒಬ್ಬ ಸ್ತ್ರೀಯು ಕೂಗುತ್ತಿರುತ್ತಾಳೆ. (ಉತ್ತರಹಿಂದುಸ್ಥಾನದಲ್ಲಿ ಶ್ರಾವಣ, ಭಾದ್ರಪದಮಾಸಗಳಲ್ಲಿ ಹಸುರು ಕೊಚ್ಚಿಸಿಕೊಳ್ಳುವ ರೂಢಿಯು ಈಗಲೂ ಕಾಣಬರುತ್ತದೆ.)

ಈ ಸ್ತ್ರೀಯು ತನಗೂ ಗುರುಗಳಾಗುವಂತಹವರು ಆ ಹಳ್ಳಿಗಳಲ್ಲಿ ಇದ್ದಾರೆಂದು ತಿಳಿದಿರುವುದಿಲ್ಲ. ಹಸುರು ಕೊಚ್ಚಿಸಿಕೊಂಡು ಅಲ್ಲಿಯ ಜನರು ಸ್ತ್ರೀ ಪುರುಷರು ಇಬ್ಬರೂ ತಮ್ಮ ಶರೀರದ ಶೋಭೆಯನ್ನು ಹೆಚ್ಚಿಸಿಕೊಳ್ಳುತ್ತಾರೆ. ಸೂಜಿಯಿಂದ ಚುಚ್ಚಿ ಅದರ ಮೇಲೆ ಬಣ್ಣವೋ, ಅಥವಾ ಏನಾದರೂ ರಸವೋ ಹಾಕಿ, ತಿಕ್ಕುವುದು ಸಾಧಾರಣ ಮಾತೇ ಆಗಿದೆ. ಈ ವಿಷಯಗಳಲ್ಲಿ ಸಭ್ಯ ಭಾರತದ ಸುಂದರಿಯರೂ ಅಸಭ್ಯರ ಸಂಗವನ್ನು ಬಿಡುವುದಿಲ್ಲ. ಆದರೆ ಈ ದ್ವೀಪದ ನಿವಾಸಿಗಳು ಒಂದು ವಿಷಯದಲ್ಲಿ ಇಲ್ಲಿಯ ನಾರಿಯರಿಗಿಂತಲೂ ಮುಂದುವರಿದಿರುತ್ತಾರೆ. ಅವರು ತಮ್ಮ ದೇಹಗಳಿಗೆ ಶಸ್ತ್ರಗಳಿಂದ ಘಾಯಮಾಡಿಕೊಳ್ಳುತ್ತಾರೆ. ಅಥವಾ ತಮ್ಮ ದೇಹದ ಚರ್ಮವನ್ನು ಬೆಂಕಿಯಿಂದ ಸುಟ್ಟುಕೊಳ್ಳುತ್ತಾರೆ.

ಅದರಿಂದ ಗುಳ್ಳೆಗಳು ಏಳುತ್ತವೆ. ಅಲ್ಲಿ ಒಂದು ಪ್ರಕಾರದ ಸೊಪ್ಪಿನ ರಸ ವನ್ನು ಶರೀರಕ್ಕೆ ತಿಕ್ಕುವುದುಂಟು. ಅದರಿಂದಲೂ ಗುಳ್ಳೆಗಳೇಳುತ್ತವೆ. ಇಂಥಾ ಉಪಾಯಗಳಿಂದ ದೇಹದ ಶೋಭೆಯು ಯಾವ ರೀತಿ ಹೆಚ್ಚು ವುದು? ಏನು ಇಲ್ಲಿಯ ಸುಂದರಿಯರು ಯಾರಾದರೂ ಇದರ ಪರೀಕ್ಷೆ ಮಾಡಿ ನೋಡುವರೇ? ಶರೀರದ ದುಃಖವನ್ನು ಸಹಿಸಿಕೊಂಡಾದರೂ ಅದರ ಶೋಭೆಯನ್ನು ಹೆಚ್ಚಿಸಿಕೊಳ್ಳುವುದೇನೂ ಭಾರತವರ್ಷದಲ್ಲಿ ಅಲಭ್ಯವಲ್ಲ. ಇಲ್ಲಿಯವರಾದರೂ ಮೂಗು, ಕಿವಿ ಚುಚ್ಚಿಸಿಕೊಂಡು ಪರಮಾತ್ಮನ ಶಿಲ್ಪಕಲೆಯಲ್ಲಿಯೂ ತಮ್ಮ ಹಸ್ತಚಮತ್ಕಾರವನ್ನು ತೋರಿ ಸುವುದರಲ್ಲಿ ಬಾಕಿ ಇಡುವುದಿಲ್ಲ.

"ಮೆಲಾನೆಶಿಯಾದ" ವಾಸಿಗಳು ಬಹಳ ಕಪ್ಪಾಗಿರುತ್ತಾರೆ. ಆದ ಕಾರಣ ದುಃಖದ ಮಾತೇನಂದರೆ—ಇಷ್ಟು ಕಷ್ಟಪಟ್ಟು ಹಸುರು ಕೊಚ್ಚಿ ಸಿಕೊಂಡರೂ ಕೂಡ ಬಹಳ ಚೆನ್ನಾಗಿ ಕಾಣಬರುವುದಿಲ್ಲ. ಮತ್ತು ಸ್ವಲ್ಪ ದೂರದಿಂದ ಹಸುರು ಕಲೆಯ ಚತುರತೆಯು ಸ್ವಲ್ಪವೂ ಕಾಣಬರು ವುದಿಲ್ಲ. "ಮೆಲಾನೆಶಿಯಾದಲ್ಲಿ" ಹಸುರು ಕೊಚ್ಚಿಸಿಕೊಳ್ಳುವ ಪ್ರೇಮಿ ಗಳು ಪುರುಷ ಮತ್ತು ಸ್ತ್ರೀ ಇಬ್ಬರೂ ಸಿಗುತ್ತಾರೆ. ಆದರೆ ಫೀಜೀ ದ್ವೀಪದಲ್ಲಿ ಸ್ತ್ರೀಮಾತ್ರರೇ ಇದರ ಉತ್ಸುಕರಾಗಿರುತ್ತಾರೆ. ಅಲ್ಲಿ ಹಸುರು ಕೊಚ್ಚುವ ಕೆಲಸವನ್ನು ಸ್ತ್ರೀಯರೇ ನಡಿಸುತ್ತಾರೆ. ಬಹಳ ಬಾಲ್ಯಾವಸ್ಥೆಯಲ್ಲಿಯೇ ಇದರ ಕೆಲಸವು ಸುರುವಾಗುತ್ತದೆ. ಮತ್ತು ಯೌವನಕಾಲದ ವರೆಗೆ ಶರೀರವೆಲ್ಲಾ ಇದರಿಂದ ತುಂಬಿಹೋಗುತ್ತದೆ. ಕೆಲವು ಸಮಯ ಯೌವನಕಾಲದಲ್ಲಿಯೂ ಇದರ ಕೆಲಸವು ನಡಿಯುತ್ತಿ ರುತ್ತದೆ. ಒಂದೇ ದಿನದಲ್ಲಿ ಅಥವಾ ಒಂದೇ ಸಲ ಎಲ್ಲಾ ಶರೀರವನ್ನು ಕೊಚ್ಚಿಸಿಕೊಳ್ಳುವದು ಬಹಳ ಕಠಿಣ ಕೆಲಸವಾಗಿರುತ್ತದೆ. ಇದು ಎಷ್ಟು ದುಃಖದಾಯಕವಾಗಿರುತ್ತದೆಂದರೆ, ಪಾಪ! ಸಣ್ಣ ಸಣ್ಣ ಬಾಲಿಕೆಯರು ಕಷ್ಟದಿಂದ ವ್ಯಾಕುಲರಾಗಿಹೋಗುತ್ತಾರೆ. ಎಷ್ಟರ ವರೆಗೆ ಅವುಗಳಿಂದ ಕಷ್ಟವು (ನೋವು) ಸಹಿಸಲಸಾಧ್ಯವಾಗುವುದಿಲ್ಲವೋ, ಅದು ವರೆಗೂ ಕಲಾವತಿಯರು ಅವುಗಳ ಬೆನ್ನು ಬಿಡುವುದಿಲ್ಲ. ಈ ಸೂಕ್ಷ್ಮಕಲಾ

ವಿಸ್ತಾರಗಳಲ್ಲಿ ತರತರದ ತಿರುವುಗಳುಳ್ಳ ಮತ್ತು ಸಣ್ಣ ಸಣ್ಣ ಕಸೂತಿ-ಬುಟ್ಟಾಗಳೂ ಕೊಚ್ಚಲೋಸುಗ ಎಷ್ಟೋ ಮಾಸಗಳು ಹಿಡಿಯುತ್ತವೆ. ಮೊದಲನೇ ಘಾಯವು ವಾಸಿಯಾದಮೇಲೆ ಎರಡನೇದಕ್ಕೆ ಸುರುವಾಗುತ್ತದೆ. ಈ ಸ್ತ್ರೀಗೆ ಪುತ್ರವತಿಯಾಗುವ ಭಾಗ್ಯವು ಪ್ರಾಪ್ತವಾಗುವುದೋ ಇಲ್ಲವೋ ಎಂದು ತಿಳಿಯುಲೋಸುಗ ಅವುಗಳ ಮುಖದ ಮೂಲೆಗಳಲ್ಲಿ ಒಂದು ವಿಧವಾದ ಹಸುರನ್ನು ಕೊಚ್ಚುತ್ತಾರೆ. ಫಿಜೀಯ ಹೆಡ್ಸ್ ಪ್ರಾಂತದಲ್ಲಿ ಒಂದು ವೇಳೆ ಯಾವದಾದರೂ ಸ್ತ್ರೀಯ ಶರೀರದಲ್ಲಿ ಹಸುರು ಇಲ್ಲದಿದ್ದರೆ ಎರಡನೇ ಸ್ತ್ರೀಯರು ಅವಳ ಬೆನ್ನುಹತ್ತುತ್ತಾರೆ. ಮತ್ತು ಆ ಸ್ತ್ರೀಯ ಶರೀರವನ್ನೆಲ್ಲಾ ಹರಿತವಾದ ಶಸ್ತ್ರಗಳಿಂದ ಚುಚ್ಚಿ ಚುಚ್ಚಿ ಗಾಯುಗಳಿಂದ ತುಂಬಿಬಿಡುತ್ತಾರೆ. ಇಷ್ಟೇ ಅಲ್ಲ, ಒಂದೊಂದು ಸಲ ಇಷ್ಟು ದೊಡ್ಡ ಅಪರಾಧಮಾಡುವವರ ಶರೀರಗಳನ್ನು ಕಡಿದು ಕಡಿದು ದೇವತೆಗಳಿಗೆ ಬಲಿಕೊಡುತ್ತಾರೆ.

ನಮ್ಮಲ್ಲಿ ಕರಿದಾದ ಕೇಶರಾಶಿಗಳು ಕವಿಗಳ ಕಲ್ಪನೆಯಲ್ಲಿಯೂ ಶೋಭಾದೃಷ್ಟಿಯಿಂದ ಕಾಣಬರುತ್ತಿದ್ದವು. ಆದರೆ ಫಾಲಿನೇಶಿಯಾದ ಒಂದು ದ್ವೀಪದಲ್ಲಿ ಕಪ್ಪಾದ ಕೇಶವನ್ನು ಸುಣ್ಣಹಚ್ಚಿ ಬೆಳ್ಳಗಾಗಿ ಮಾಡುತ್ತಾರೆ. ನ್ಯೂ ಕಾಲಿಡೋನಿಯಾದಲ್ಲಿ ಮಕ್ಕಳು ಹುಟ್ಟಿದ ಕೂಡಲೇ ಅದರ ತಲೆಯುನ್ನು ಒತ್ತಿ ಬಿಸಿನೀರಿನಲ್ಲಿ ಮುಳುಗಿಸುತ್ತಾರೆ. ಇದೇ ರೀತಿ ಒತ್ತಿ ಒತ್ತಿ ತಲೆಯುನ್ನು ಉದ್ದಮಾಡಿ ಕತ್ತಿಗಿಂತ ಬಹಳ ತೋರವಾಗಿರಿಸುವುದಿಲ್ಲ. ಕೆಲವು ಕಡೆ ಮಕ್ಕಳ ಮುಖವು ಯೋದ್ಧರಂತೆ ಗಂಭೀರವಾಗಿ ತೋರಲು ಉದ್ದವಾಗಿ ಮಾಡಲ್ಪಡುತ್ತದೆ. ಮತ್ತು ಹುಡುಗಿಯುರ ಮುಖವು ಗಲ್ಲದಿಂದ ಎತ್ತಲ್ಪಟ್ಟು ದುಂಡಗಾಗಿ ಮಾಡಲ್ಪಡುತ್ತದೆ. ಮಾನಿಕುಲಾದಲ್ಲಿ ಮಗುವಿನ ತಲೆಗೆ ಗಟ್ಟಿಯಾದ ಕಟ್ಟನ್ನು ಕಟ್ಟಿಬಿಡುತ್ತಾರೆ, ಮತ್ತು ಮಕ್ಕಳು ಹತ್ತು ಹದಿನಾರು ವರ್ಷದವುಗಳಾಗುವ ವರೆಗೂ ಬಿಚ್ಚುವದಿಲ್ಲ. ಹೀಗೆ ಮಾಡುವುದರಿಂದ ಮಕ್ಕಳಿಗೆ ಎಷ್ಟು ಕಷ್ಟವಾಗಬಹುದು! ಅವುಗಳ ಕಣ್ಣುಗಳು ಈ ಸ್ಥಿತಿಯಲ್ಲಿ ಒಡೆದು ಮುಂದೆ ಬಂದಂತೆ ಕಾಣುತ್ತದೆ. ಒಂದು ವೇಳೆ ಯಾವ ಹುಡುಗಿಯುರ

ದ್ದಾದರೂ ಸಣ್ಣದಿನಲ್ಲಿಯೇ ತಲೆಯನ್ನು ಸುಂದರವಾಗಿ ಮಾಡದಿದ್ದರೆ ದೊಡ್ಡವರಾದಮೇಲೆ ಅವರನ್ನು ಯಾರೂ ವಿವಾಹಮಾಡಿಕೊಳ್ಳಲಪೇಕ್ಷಿಸುವುದಿಲ್ಲ.

ಭಾರತದಲ್ಲಿ ಒಂದು ವಿಧವಾದ ಹಲ್ಲುಪುಡಿಯಿಂದ ಹಲ್ಲುಜ್ಜಿ ಹಲ್ಲನ್ನು ಕಪ್ಪುಮಾಡಿಕೊಳ್ಳುವ ಪದ್ಧತಿಯು ಈಗಲೂ ಅಲ್ಲಲ್ಲಿ ಕಾಣಬರುತ್ತದೆ. ಆದರೆ ಫಾಲಿನೇಶಿಯಾದಲ್ಲಿ ಕೂಡ ಕಪ್ಪುಹಲ್ಲುಗಳಿಗೆ ಬಹಳ ಆದರವಿರುತ್ತದೆ. ಅಡಕೆ, ಎಲೆ, ಸಣ್ಣಮೆಣಸಿನ ಎಲೆ, ಸುಣ್ಣ, ಕಾಚು ಇವಿಷ್ಟನ್ನು ಕೂಡಿಸಿ ತಿನ್ನುವ ರೂಢಿಯುಂಟು. ಇದರಿಂದ ಹಲ್ಲುಗಳಲ್ಲಿ ಕಪ್ಪಾದ ಕಲೆಗಳು ನಿಲ್ಲುತ್ತವೆ. ಅಲ್ಲಿ ನಾಯಿಗಳಂತೆ ಬಿಳಿಯಾದ ಹಲ್ಲನ್ನು ಇಟ್ಟುಕೊಂಡಿರುವುದು ಬಹಳ ನಿಂದಾಸ್ಪದವು.

ಹಾರ, ನೇವಳ, ಮುಂದಲೆಕಟ್ಟು, ಬಾಜೂಬಂದು (ಒಂಕಿ), ಬಳಿಗಳು, ಕಿವಿಗಳ ವಾಲೆಗಳು, ಮೂಗುಬೊಟ್ಟುಗಳು, ಕಾಲಿನ ಮಣಿಗಂಟೆನ ಕಟ್ಟುಗಳು (ಕಾಲುಬಳೆ) ಇವುಗಳಲ್ಲದೆ ಇನ್ನು ಅನೇಕತರದ ಆಭರಣಗಳು ಸ್ತ್ರೀಯರ ಆದರದ ಸಾಮಗ್ರಿಯಾಗಿರುತ್ತವೆ. ನೀವುಗಳು ಜೀಕಾದರೆ ಈ ಆಭರಣಗಳನ್ನು ಬೆಳ್ಳಿ ಭಂಗಾರಾದಿಗಳಿಂದ ಮಾಡಿಸಿಟ್ಟುಕೊಳ್ಳಿರಿ. ಅಥವಾ ನಿಮ್ಮ ನೀಚಜಾತಿಯ ದಾಸಿಯರು ಕಂಚು ಹಿತ್ತಾಳಿಗಳಿಂದ ಮಾಡಿಸಿಕೊಂಡು ತೊಟ್ಟುಕೊಳ್ಳಲಿ. ಆದರೆ ದ್ವೀಪವಾಸಿನಿಯರಾದ ಸುಂದರ ಹುಡುಗಿಯರು ಕಟ್ಟಿಗೆ, ಎಲೆ, ಬಿದುರು, ಬೀಜ, ಚಿಕ್ಕೆ, ಹುಲ್ಲು ಇತ್ಯಾದಿಗಳಿಂದ ಮಾಡಿಕೊಂಡು ತಮ್ಮ ಆಭರಣಲಾಲಸೆಗಳನ್ನು ಪೂರ್ಣಮಾಡಿಕೊಳ್ಳುತ್ತಾರೆ. ಎಲುಬು, ಬಾವಲಿ, ಪಕ್ಷಿ ಮೊದಲಾದವುಗಳ ರೆಕ್ಕೆ, ಹಲ್ಲು, ಆಮೆಗಳ ಚಿಪ್ಪು, ಗರಿ ಮೊದಲಾದವುಗಳಿಂದಲೂ ಮತ್ತು ಮೃಗಗಳ (ಪಶು) ಬಾಲದಿಂದಲೂ ಕೆಲಸ ನಡಿಸಿಕೊಳ್ಳುತ್ತಾರೆ. ಇನ್ನು ಕಲ್ಲು ಕನಡಿ(ಫೋಫೋ)ಗಳ ಮಾತೇನು?

ಭಾರತದ ಅಜಮೀರ್ ಪ್ರಾಂತದಲ್ಲಿ ತೆಂಗಿನಕಾಯಿಯ ಚಿಪ್ಪ(ಗೆರಟೆ)ನ್ನು ಗರಗಸದಿಂದ ಕತ್ತರಿಸಿ ಅದಕ್ಕೆ ಬಳೆಗಳ ಜನ್ಮವನ್ನು ಕೊಡುತ್ತಾರೆ. ಹೀಗಿರುವಾಗ ದ್ವೀಪನಿವಾಸಿಯರಾದ ಅಸಭ್ಯಜನರು

ತಮ್ಮ ದೇಶದಲ್ಲಿ ಸುಲಭವಾಗಿ ಸಿಗುವ ವಸ್ತುಗಳಿಂದ ಕೆಲಸ ನಡಿಸುವದ ರಲ್ಲಿ ಏನೂ ಆಶ್ಚರ್ಯವಿಲ್ಲ. ಬಂಗಾಲದ ಸೌಭಾಗ್ಯವತಿಯರು ತಮ್ಮ ಕೋಮಲ ಹಸ್ತಗಳಲ್ಲಿ ಶಂಖ ಮತ್ತು ಕಬ್ಬಿಣದ ಬಳೆಗಳನ್ನು ಧರಿಸಿ ಕೊಳ್ಳುವುದು ತಮ್ಮ ಸೌಮಾಂಗಲ್ಯವನ್ನು ಅಚಲವಾಗಿಡುವುದಕ್ಕೆ ಆವ ಶ್ಯಕವೆಂದು ತಿಳಿಯುತ್ತಾರೆ. ಅವರಲ್ಲಿ ಈ ಪ್ರಕಾರದ ಎರಡೂ ಬಳೆ ಗಳಿಗೆ ಶಾಂಖಾ ಮತ್ತು ಲೋಹಾ ಎಂದು ಹೇಳುತ್ತಾರೆ. ಈ ಸಮಯ ದಲ್ಲಿ ಅದರ ಮೇಲೆ ಭಂಗಾರ ಹಾಕಿಸಿ ನಕ್ಷೆಬಿಡಿಸಿಕೊಳ್ಳುತ್ತಾರೆ.

ನನ್ನ ಹೇಳಿಕೆಯ ತಾತ್ಪರ್ಯವೇನಂದರೆ—ಸಭ್ಯಭಾರತರ ಮೊದ ಲ್ಗೊಂಡು ಅಸಭ್ಯ ದ್ವೀಪನಿವಾಸಿಗಳ ವರೆಗೂ ಅಲ್ಲ-ಅಲ್ಲ ಮಹಾ ಸುಸಭ್ಯ ಯುರೋಪಿಯನ್ ಸಮಾಜದಲ್ಲಿಯೂ ಕೂಡ ಆಭರಣಕ್ಕೋ ಸ್ಕರ ಎಲ್ಲರೂ ಸಾಯುತ್ತಾರೆ. ಅರ್ಥಾತ್ ಆಶೆಪಡುತ್ತಾರೆ. ಅಂತರ ವೆಂದರೆ ಉಪಾದಾನಗಳ ಚುನಾವಣೆಯೇ—ಊಟ, ತಿಂಡಿ, ಜಾಗ್ರತ್, ಸುಷುಪ್ತಿ, ಭಯ, ಜನ್ಮ, ಮೃತ್ಯುಗಳಿಗೆ ಸಮಾನವಾಗಿ ಭೂಷಣದ ಚಿಂತೆಯೂ ಕೂಡ ಸಂಸಾರವನ್ನೆಲ್ಲಾ ಭ್ರಮಿಸುವಂತೆ ಮಾಡುತ್ತದೆ. ಯಾವಾಗ ಮನುಷ್ಯನು ಎಲ್ಲಾ ಶಿಲ್ಪಿಕೆಲಸದ ಜನ್ಮದಾತೃವಾದ ಪರಮಾ ತ್ಮನ ಶಿಲ್ಪಕೆಲಸದಲ್ಲಿಯೂ ತಮ್ಮ ಕೈಚಮತ್ಕಾರವನ್ನು ತೋರಿಸು ತ್ತಾನೋ, ಆಗ ಅತ್ಯಂತ ಆಶ್ಚರ್ಯವಾಗುತ್ತದೆ.



# ನಿಜವಾದ ವೈರಾಗ್ಯ.



ಎಲ್ಲಿಯೋ ಒಂದುಕಡೆ ಒಂದು ಸಮಯದಲ್ಲಿ ಒಬ್ಬ ಸನ್ಯಾಸಿಯು ಬಂದನು. ಮತ್ತು ಒಂದುಕಡೆ ಒಂದು ಮರದಡಿಯಲ್ಲಿ ಅಗ್ನಿಯನ್ನು ಪ್ರಜ್ವ ಲಿಸಿ ಅಲ್ಲಿಯೆ ಇರಲಾರಂಭಿಸಿದನು. ಅವನು ಈಶ್ವರಭಕ್ತನಾಗಿ ಪವಿತ್ರ ಸಾಧುವಾಗಿದ್ದನು. ಅವನ ಹೆಸರು ನಾಲ್ಕೂ ಕಡೆಗಳಲ್ಲಿ ಪ್ರಸಿದ್ಧವಾಯಿತು.

ಹೆಸರನ್ನು ಕೇಳಿ ನಗರವಾಸಿಯರಾದ ನರ-ನಾರಿಯರು ಅವನ ಬಳಿಗೆ ಬರಲಾರಂಭಿಸಿದರು. ಒಂದು ದಿನ ಸಾಹುಕಾರಿಣಿಯೊಬ್ಬಳು ಸಾಧುವಿನ ದರ್ಶನಕ್ಕೋಸ್ಕರ ಬಂದಳು.

ಸಾಹುಕಾರಿಣಿಯು ಸುಂದರಿಯಾಗಿರಲಿಲ್ಲ. ಅವಳ ವರ್ಣ ಕಪ್ಪು, ಸಣ್ಣ ಸಣ್ಣ ಕಣ್ಣುಗಳು, ಮೊಂಡು ಮೂಗು, ಮತ್ತು ಕೈಕಾಲುಗಳು ದಪ್ಪದಪ್ಪವಾಗಿದ್ದವು. ಆದರೂ ತನ್ನ ರೂಪದ ಅಭಾವವನ್ನು ದೂರೀಕರಿಸಲೋಸುಗವೋ, ಅಥವಾ ತನ್ನ ಐಶ್ವರ್ಯದ ಮದದಿಂದಲೋ, ಯಾವ ಕಾರಣದಿಂದಲೇ ಆಗಲಿ ಶರೀರವನ್ನು ಅಲಂಕರಿಸಿಕೊಳ್ಳುವುದರಲ್ಲಿ ಅವಳ ಮನಸ್ಸು ಬಹಳವಾಗಿರುತ್ತಿತ್ತು. ಆದುದರಿಂದಲೇ ಈ ಸಾಧುದರ್ಶನಕ್ಕೆ ಬರುವಾಗಲೂ ವಸ್ತ್ರ ಭೂಷಣಗಳನ್ನು ಧರಿಸುವುದರಲ್ಲಿ ಏನೂ ಹಿಂದಾಗಲಿಲ್ಲ. ಅವಳ ನಖದಿಂದ ಶಿಖದ ವರೆಗೂ ಚಿನ್ನ ಬೆಳ್ಳಿಯ ಹೊರೆಯು ಹೊರಿಸಲ್ಪಟ್ಟಿತ್ತು. ಬಹಳ ಬೆಲೆಯುಳ್ಳ ಮಿನುಗುತ್ತಿರುವ ಬನಾರಸ್ ಶೀರೆಯನ್ನು ಉಟ್ಟುಕೊಂಡಿದ್ದಳು. ಅವಳ ಅಲಂಕಾರದ ಆಡಂಬರವನ್ನು ನೋಡಿ ಸನ್ಯಾಸಿಯು ಮನದಲ್ಲಿಯೇ ಬೇಸತ್ತು ಅವಳನ್ನು ಕುರಿತು, ಮಾತೆ! ನಿನಗೆ ಇಲ್ಲಿ ಏನು ಬೇಕಾಗಿದೆ? ಎಂದು ಕೇಳಿದನು.

**ಸಾಹುಕಾರಿಣಿ:**— ತಮ್ಮ ಚರಣದರ್ಶನಕ್ಕೋಸ್ಕರ ಬಂದಿದ್ದೇನೆ.

**ಸನ್ಯಾಸಿ:**— ಸಾಧುಗಳ ದರ್ಶನಕ್ಕೋಸ್ಕರ ಬಂದಿರುತ್ತೀ ಆದರೆ ಇಷ್ಟು ವಸ್ತ್ರಭೂಷಣಗಳ ಆವಶ್ಯಕತೆ ಏಕೆ?

ಸಾಹುಕಾರಿಣಿಯು ಈ ಮಾತನ್ನು ಕೇಳಿ ಸ್ವಲ್ಪ ಲಜ್ಜಿತಳಾದಳು. ಮತ್ತು ಮೌನವಾಗಿ ನಿಂತುಬಿಟ್ಟಳು. ಆಗ ಸನ್ಯಾಸಿಯು ಮತ್ತು ಹೇಳುತ್ತಾನೆ, ಮಾತೆ! ನನ್ನ ಮಾತಿನ ಮೇಲೆ ಅವಿಶ್ವಾಸಮಾಡಬೇಡ. ಸಾಧು ಸನ್ಯಾಸಿಗಳ ಸ್ವಭಾವವೇ ಹೀಗಿರುತ್ತದೆ. ಸನ್ಯಾಸಿಗಳು ಯಾವದು ಮನಸ್ಸಿಗೆ ಬರುತ್ತದೋ, ಅದನ್ನು ಹೇಳಿಯೇ ಬಿಡುತ್ತಾರೆ. ಇಷ್ಟವಿದ್ದಲ್ಲಿ ಕುಳಿತುಕೋ.

ಸನ್ಯಾಸಿಯ ಮಾತುಗಳನ್ನು ಕೇಳಿ ಅವಳಿಗೆ ಸ್ವಲ್ಪ ಧೈರ್ಯವಾಯಿತು. ಅವಳು ಹತ್ತಿರವೇ ಒಂದು ಕಡೆ ಕುಳಿತಳು. ಸನ್ಯಾಸಿಯು ಮತ್ತಿಬ್ಬರು ಮನುಷ್ಯರಲ್ಲಿ ಸ್ವಲ್ಪ ಹೊತ್ತು ಮಾತಾಡುತ್ತಿದ್ದು ಸಾಹುಕಾರಿಣಿಯನ್ನು ಕುರಿತು, ''ಹಾಗಾದರೆ ಮಾತೆ ಚರಣದರ್ಶನವನ್ನು ನೀನು ಮಾಡಿದಿ. ಇನ್ನು ಹೋಗು'' ಎಂದನು.

**ಸಾಹುಕಾರಿಣಿ:**— ತಂದೆ! ನಾನು ತಮ್ಮಿಂದ ಏನಾದರೂ ಧರ್ಮೋಪದೇಶವನ್ನು ಆಶಿಸುತ್ತೇನೆ.

**ಸನ್ಯಾಸಿ:**— ನಿನ್ನ ಧರ್ಮ, ಕರ್ಮಗಳೆಲ್ಲಾ ವಸ್ತ್ರಾಭರಣಗಳಲ್ಲಿ ಮುಳುಗಿರುವುದೇ. ಈ ಪ್ರವೃತ್ತಿಯು ನಿಂತಮೇಲೆ ಧರ್ಮ, ಕರ್ಮಗಳ ಯೋಚನೆಮಾಡು.

**ಸಾಹುಕಾರಿಣಿ:**— ತಂದೇ! ನಾವುಗಳು ಸಾಂಸಾರಿಕ ಜೀವಿಗಳು. ಪಾಪದಲ್ಲಿಯೇ ಮತಿಯು ಪ್ರವೇಶಿಸುತ್ತದೆ. ಇದರಿಂದಲೇ ತಮ್ಮ ಚರಣ ದರ್ಶನಕ್ಕೋಸ್ಕರ ಬಂದಿದ್ದೇನೆ. ತಾವೇ ನನ್ನನ್ನು ಪಾಪಿಯೆಂದು ತಿರಸ್ಕರಿಸಿದರೆ ಮತ್ತೆ ನನ್ನ ಗತಿ ಏನಾಗುವುದು?

**ಸನ್ಯಾಸಿ:**— ನಾವುಗಳು ಯಾರನ್ನೂ ಪಾಪಿಯೆಂದು ತಿರಸ್ಕರಿಸುವುದಿಲ್ಲ. ವಿಚಾರವೇನಂದರೆ—ತುಂಬಾ ನೀರು ತುಂಬಿರುವ ಕೊಡಕ್ಕೆ ಗಾಳಿಯು ತುಂಬುವುದಿಲ್ಲ. ವಿಷಯವಾಸನೆಯಿಂದ ನಿನ್ನ ಹೃದಯವು ತುಂಬಿಹೋಗಿದೆ. ಅದರಲ್ಲಿ ಧರ್ಮದ ಗಾಳಿಯು ಯಾವ ರೀತಿ ಪ್ರವೇಶಿಸುವುದು?

**ಸಾಹುಕಾರಿಣಿ:**— ತಂದೇ! ತಮಗೆ ಅಸಂಭವವಾದದ್ದಾದರೂ ಏನು? ತಮ್ಮ ಕೃಪಾಮಾತ್ರದಿಂದಲೇ ಪಾಪ ಲೇಶವೂ ಇರಲಾರದು.

ಸನ್ಯಾಸಿಯು, ಸಾಹುಕಾರಿಣಿಯು ಸಹಜರೀತಿಯಲ್ಲಿ ಕೇಳಲಾರಳು. ಅವಳನ್ನು ಹಿಂತಿರುಗಿಸುವುದು ಸಾಧಾರಣದ ಮಾತಲ್ಲವೆಂದು ತಿಳಿದು, ತಾಯೇ! ಸ್ವಲ್ಪ ನಿಲ್ಲು ಎಂದು ಹೇಳಿದನು.

ಇಷ್ಟರಲ್ಲಿಯೇ ಹಸಿವಿನಿಂದ ಬಳಲುತ್ತಾ, ವಸ್ತ್ರವಿಹೀನರಾದ ಭಿಕ್ಷುಕರಿಬ್ಬರು ಬಂದರು. ಹಸಿವಿನಿಂದ ಅವರ ಶರೀರವು ಒಣಗಿಹೋಗಿದ್ದವು. ಶರೀರದಲ್ಲಿ ಮಲಿನವಾದ ಹರಕುಬಟ್ಟೆಗಳಿದ್ದವು. ಅವರನ್ನು ನೋಡಿ ಸನ್ಯಾಸಿಯು ಹೇಳುತ್ತಾನೆ, ಭಿಕ್ಷುಕರೇ! ಸನ್ಯಾಸಿಯ ಬಳಿಯಲ್ಲಿ ಏನಿದೆ? ಇಲ್ಲಿಗೇಕೆ ಬಂದಿರಿ?

**ಭಿಕ್ಷುಕರು:**— ಅಪ್ಪಾ ತಂದೇ! ಏನಾದರೂ ತಿನ್ನಲಿಕ್ಕೆ ಕೊಡಬೇಕು. ಈಗ ಎರಡು ದಿನವೂ ಅನ್ನನೀರುಗಳಿಲ್ಲದೆ ಕಳೆಯಿತು. ಇನ್ನು ಇರುವುದಾಗುವುದಿಲ್ಲ.

ಅವರ ಕರುಣಾರ್ದ್ರವಾದ ಮಾತುಗಳನ್ನು ಕೇಳಿ ಸನ್ಯಾಸಿಯ ಹೃದಯುವು ಕರಗಿಹೋಯಿತು. ಕಣ್ಣುಗಳೆರಡೂ ದುಃಖಾಶ್ರುಗಳಿಂದ ತುಂಬಿದವು. ಕಡೆಗೆ, ಒಳ್ಳೇದಪ್ಪಾ! ಕುಳಿತುಕೊಳ್ಳಿರಿ. ಪರಮಾತ್ಮನು ನಿಮಗೋಸ್ಕರ ಏನಾದರೂ ಕಳುಹಿಸುತ್ತಾನೋ ಇಲ್ಲವೋ ನೋಡೋಣ ಎಂದು ಹೇಳಿದನು.

ಸನ್ಯಾಸಿಯ ವಚನವನ್ನು ಕೇಳಿ ಭಿಕ್ಷುಕರಿಬ್ಬರೂ ಆಶಾಮಗ್ನರಾಗಿ ಕುಳಿತುಕೊಂಡುಬಿಟ್ಟರು. ಆಗ ಸನ್ಯಾಸಿಯು ಸಾಹುಕಾರಿಣಿಯನ್ನು ಕುರಿತು, ತಾಯಿಾ! ನೀನು ಧರ್ಮೋಪದೇಶವನ್ನು ಕೇಳಬೇಕಾಗಿ ಅಪೇಕ್ಷಿಸುತ್ತೀ. "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಇದೇ ಎಲ್ಲಾ ಧರ್ಮಗಳ ಸಾರವು. ಪರೋಪಕಾರವೆಂಬುದೇ ಧರ್ಮವು. ಆದಕಾರಣ ಈಗ ಪರೋಪಕಾರಮಾಡುವ ಸಮಯುವು ಬಂದಿದೆ. ನಿನ್ನ ಎದುರು ಇಬ್ಬರು ಭಿಕ್ಷುಕರು ಕುಳಿತಿದ್ದಾರೆ ನೋಡು. ಹಸಿವಿನಿಂದ ಪರವಶರಾಗಿದ್ದಾರೆ. ಇವರ ದೇಹದಲ್ಲಿ ಹರಕುಬಟ್ಟೆಯು ತುಂಬಿದೆ. ಇವರೇ ಯಥಾರ್ಥವಾದ ದಾನಕ್ಕೆ ಪಾತ್ರರೆಂದು ತಿಳಿಯುತ್ತೇನೆ, ಎಂದು ಹೇಳಿ ಮತ್ತು

ದರಿದ್ರಾನ್ ಭರ ಕೌಂತೇಯ ಮಾ ಪ್ರಯಚ್ಛೇಶ್ವರೇ ಧನಂ।
ವ್ಯಾಧಿತಸ್ಯೌಷಧಂ ಪಥ್ಯಂ ನೀರೋಗಸ್ಯ ಕಿಮೌಷಧೈಃ ॥

ಯಾರು ದರಿದ್ರನೋ ಅವನಿಗೇ ದಾನಮಾಡು. ಧನವಂತರಿಗೆ ಧನವನ್ನು ಕೊಡಬೇಡ. ಯಾವನು ರೋಗಿಯೋ ಅವನಿಗೆ ಔಷಧವನ್ನು ಕೊಡಬೇಕು. ನೀರೋಗಿಯಾದವನಿಗೆ ಔಷಧವನ್ನು ಕೊಡಿಸಿದ್ದರಿಂದ ಏನು ಲಾಭವಾದೀತು? ಆದ್ದರಿಂದ ತಾಯೇ! ನೀನು ನಿನ್ನ ಕಿವಿಗಳ ವಾಲೆಗಳೆರಡನ್ನು ತೆಗದು ಈ ಇಬ್ಬರಿಗೂ ಕೊಟ್ಟುಬಿಡು. ಇದೇ ನನ್ನ ವಿನಂತಿಯು. ದೀನರಾದ ಇವರಿಬ್ಬರೂ ಅಕಾಲಮರಣದಿಂದ ಬದುಕುವರು.

ಸನ್ಯಾಸಿಯು ಬಳಿಗೆ ಬಂದು ಇಂಥಾ ಕಷ್ಟದಲ್ಲಿ ಸಿಕ್ಕಿಬೀಳಬೇಕೆಂಬದಾಗಿ ಸಾಹುಕಾರಿಣಿಗೆ ಸ್ವಪ್ನದಲ್ಲಿಯೂ ಯೋಚನೆಯಾಗಿರಲಿಲ್ಲ. ಪಾಪ! ಬಹಳ ಸಂಕಟದಲ್ಲಿ ಬಿದ್ದಳು. ಕಿವಿಯ ಸ್ವರ್ಣಮಯವಾದ ವಾಲೆಗಳನ್ನು ಯಾವ ರೀತಿ ಭಿಕ್ಷುಕರಿಗೆ ಕೊಟ್ಟುಬಿಡುವಳು? ಇಷ್ಟು ಸಾಹಸವು ಅವಳಲ್ಲಿರಲಿಲ್ಲ. ಯಾವ ಸ್ತ್ರೀಗೆ ತಾನೇ ಇದ್ದೀತು. ಆದರೆ ಸನ್ಯಾಸಿಯು ಇವನ್ನೆ ಕೇಳುತ್ತಿದ್ದಾನೆ. ಅವಳೇನು ಮಾಡುವಳು? ಅವಳು ಯೋಚನೆ ಮಾಡಿ ಒಂದು ಉತ್ತರವನ್ನು ತಿಳಿದು ನಿಶ್ಶ್ವಸಿ ಹೇಳಿದಳು. ಸ್ವಾಮಿಾ! ನನ್ನ ತಂದೆಯು ಬಹಳ ಪ್ರೀತಿಯಿಂದ ಇದನ್ನು ಮಾಡಿಸಿದ್ದನು. ಆದುದರಿಂದ ತನ್ನ ತಂದೆಯ ಕೈನಿಶಾನಿಯನ್ನು ಯಾರು ಯಾರಿಗಾದರೂ ಹೇಗೆ ಕೊಟ್ಟುಬಿಟ್ಟಾರು? ವಾಲೆಯನ್ನು ನಾನು ಕೊಡಲಾರೆನು.

**ಸನ್ಯಾಸಿ:**— ಒಳ್ಳೇದು, ಹಾಗಾದರೆ ಕೈಯಲ್ಲಿರುವ ಬಳೆಗಳೆರಡನ್ನು ತೆಗದು ಕೊಟ್ಟುಬಿಡು.

**ಸಾಹುಕಾರಿಣಿ:**— ಇದೂ ಕೂಡ ತಂದೆಯೇ ಕೊಟ್ಟಿರುವದಲ್ಲ?

**ಸನ್ಯಾಸಿ:**— ಹಾಗಾದರೆ ಇದನ್ನೇ ತಂದೆಯ ನಿಶಾನಿ ಎಂದು ತಿಳಿದುಕೊಂಡು ವಾಲೆಗಳೆರಡನ್ನು ಕೊಟ್ಟುಬಿಡು.

ಸಾಹುಕಾರಿಣಿಯು ಇಂಥಾ ಪರೀಕ್ಷೆಯಲ್ಲಿ ಬೀಳುವೆನೆಂದು ತಿಳಿದಿರಲಿಲ್ಲ. ಸನ್ಯಾಸಿಯಲ್ಲಿ ಅವಳು ಮನಬಂದಂತೆ ಮಾತಾಡಲಾರಂಭಿಸಿ, "ಈ ಆಭರಣಗಳಿಗೆ ಬದಲಾಗಿ ತಮ್ಮ ಅಪ್ಪಣೆಯಾದರೆ ಕೆಲವು ರೂಪಾಯಿಗಳನ್ನು ಕೊಡುತ್ತೇನೆ. ಇವರಿಗೂ ರೂಪಾಯಿಗಳೇ ಬೇಕಲ್ಲವೇ?

ವಾಲೆಗಳನ್ನು ತೆಗದುಕೊಂಡು ಇವರೇನುಮಾಡುವರು? ಮಾರುವುದೇ ಅಲ್ಲವೇ?'' ಎಂದಳು.

**ಸನ್ಯಾಸಿ:**—ತಾಯಿಾ! ಸನ್ಯಾಸಿಯರು ಬಹಳ ಹಠವಾದಿಗಳಾಗಿರುತ್ತಾರೆ. ಬಾಯಿಯಿಂದ ಯಾವ ಮಾತು ಹೊರಡುತ್ತದೋ, ಅದನ್ನೇ ದೃಢಪಡಿಸುತ್ತಾರೆ. ನೀನು ಲಕ್ಷ ರೂಪಾಯಿ ಕೊಡು, ಆದರೂ ನಾನು ಕೇಳಲಾರೆ. ನಿನಗೆ ಈ ವಾಲೆಗಳಲ್ಲಿ ಬಹಳ ಆಸಕ್ತಿ ಇರುವುದಾಗಿ ಕಾಣಬರುತ್ತದೆ. ನೀನು ಯಾವಾಗ ಧರ್ಮದ ತೃಷಿತಳಾಗಿ ನನ್ನ ಬಳಿಗೆ ಬಂದಿದ್ದೀಯೋ, ಆಗ ನಾನು ಎಲ್ಲಕ್ಕೂ ಮೊದಲು ನಿನಗೆ ಬಹಳ ಆಸಕ್ತಿ ಇರುವ ಸಾಮಗ್ರಿಯನ್ನೇ ಕೇಳುವೆನು. ಹೇಳು, ಎರಡು ವಾಲೆಗಳನ್ನು ತೆಗೆದುಕೊಡುವಿಯೋ, ಇಲ್ಲವೋ?

**ಸಾಹುಕಾರಿಣಿ:**—(ಕೈಜೋಡಿಸಿಕೊಂಡು) ತಂದೇ! ಕ್ಷಮಿಸಿರಿ. ಇನ್ನೇನು ಹೇಳುತ್ತೀರೋ, ಅದನ್ನು ಕೊಡಲಿಕ್ಕೆ ತಯಾರಿರುವೆನು. ತಾವು ಶಾಂತರಾಗಿರಿ.

ಸನ್ಯಾಸಿಯು ಈ ಮಾತಿಗೆ ಏನೂ ಉತ್ತರ ಕೊಡಲಿಲ್ಲ. ಸಾಹುಕಾರಿಣಿಯು ಕಡೆಯಿಂದ ಮುಖತಿರುಗಿಸಿಕೊಂಡು ಬೇರೆ ಜನರಲ್ಲಿ ಮಾತಾಡಲಾರಂಭಿಸಿದನು. ಇತ್ತ ಸಾಹುಕಾರಿಣಿಯ ಹೃದಯದಲ್ಲಿ ದೇವಾಸುರ ಸಂಗ್ರಾಮವಾಗಲಾರಂಭಿಸಿತು. ದುಃಖಾತಿಶಯದಿಂದ ಗಾಬರಿಗೊಂಡಳು. ಕಡೆಗೆ ಯಾವಾಗ ದುಃಖವನ್ನು ಸಹಿಸಲಾಗದಾಯಿತೋ, ಆಗ ವಾಲೆಗಳನ್ನು ಕೊಟ್ಟುಬಿಡುವುದಾಗಿ ನಿಶ್ಚೈಸಿ ಸನ್ಯಾಸಿಯನ್ನು ಕುರಿತು, ''ಸ್ವಾಮಿಾ! ಈ ವಾಲೆಯನ್ನು ತೆಗೆದುಕೊಳ್ಳಿರಿ. ನಾನು ಇಷ್ಟರ ವರೆಗೂ ಭೋಗವಾಸನೆಗಳಲ್ಲಿ ಜಗಳವಾಡುತ್ತಿದ್ದೆನು. ಆದರೆ ತಂದೇ! ಈಗ ನಾನು ಯೋಗ್ಯ ಪಾತ್ರಗಳಲ್ಲಿ ದಾನಮಾಡಲೋಸುಗ ಭೋಗವಾಸನೆಗಳನ್ನು ಕಾಲಿನಿಂದೊದಿಯುವುದು ಒಳ್ಳೇದೆಂದು ತಿಳಿದೆನು. ಆದುದರಿಂದಲೇ ನಾನು ತಮ್ಮ ಆಜ್ಞೆಯನ್ನು ಶಿರಸಾ ವಹಿಸಲು ತಯಾರಿದ್ದೇನೆ.'' ಎಂದು ಹೇಳಿದಳು.

ಸನ್ಯಾಸಿಯು ತಿರುಗಿ ನೋಡಿದನು. ಸಾಹುಕಾರಿಣಿಗೆ ಯಾವ ವಾಲೆಗಳಲ್ಲಿ ಬಹಳ ಆಸಕ್ತಿ ಇತ್ತೋ, ಅದು ಈಗ ಅಂತ್ಯವಾಗಿಹೋಯಿತು. ಅನುರಾಗವನ್ನು ನಾಶಪಡಿಸುವುದೇ ಅವನ ಇಷ್ಟವಾಗಿತ್ತು. ತನ್ನ ಇಷ್ಟಾಪೂರ್ತಿಯಾದದ್ದನ್ನು ನೋಡಿ ಆಕೆಯನ್ನು ಕುರಿತು, "ಇನ್ನು ನನಗೆ ಈ ವಾಲೆಗಳವಶ್ಯವಿಲ್ಲ. ನನ್ನ ಉದ್ದೇಶವು ಸಫಲವಾಯಿತು. ಎಂದು ಹೇಳಿ ತನ್ನ ಶಿಷ್ಯನನ್ನು ಕುರಿತು, ನಿನ್ನೆ ಒಬ್ಬ ಭಕ್ತನು ಕೆಲವು ರೂಪಾಯಿಗಳನ್ನು ತಂದುಕೊಟ್ಟಿದ್ದನು. ನೋಡು, ಆ ಮೃಗಚರ್ಮದ ಕೆಳಗಿರಬೇಕು. ಆ ರೂಪಾಯಿಗಳನ್ನೆಲ್ಲಾ ಈ ಇಬ್ಬರು ಭಿಕ್ಷುಕರಿಗೂ ಕೊಟ್ಟುಬಿಡು" ಎಂದು ಹೇಳಿದನು. ಶಿಷ್ಯನು ಹಾಗೆಯೇ ಮಾಡಿದನು.

ಸಾಹುಕಾರಿಣಿಯು ಸನ್ಯಾಸಿಯ ಈ ಪರಿಯ ತ್ಯಾಗಧರ್ಮವನ್ನು ನೋಡಿ ತನ್ನನ್ನು ತನ್ನ ಮನಸ್ಸಿನಲ್ಲಿಯೇ ಧಿಕ್ಕರಿಸಿಕೊಂಡಳು. ಆ ದಿನ ಅವಳಿಗೆ ಯಾವ ತ್ಯಾಗದ ಶಿಕ್ಷಣವು ಸಿಕ್ಕಿತೋ, ಅದನ್ನು ಅವಳು ತನ್ನ ಮರಣದ ಪರಿಯಂತವೂ ಮರಿಯಲಿಲ್ಲ. ಸನ್ಯಾಸಿಯು ಅವಳು ಕೊಟ್ಟ ವಾಲೆಗಳನ್ನು ತೆಗದುಕೊಳ್ಳಲಿಲ್ಲ. ಆದರೂ ಅವಳು ತನ್ನ ಮನೆಗೆ ಹಿಂತಿರುಗಿದ ಮೇಲೆ ತನ್ನ ಎಲ್ಲಾ ಆಭರಣಗಳನ್ನು ತೆಗದು ಅಕ್ಕಸಾಲೆಯನ್ನು ಕರೆಯಿಸಿ ಎಲ್ಲವನ್ನೂ ಮಾರಿ ಅದರಿಂದ ಬಂದ ಹಣದಿಂದ ಅವಳು ಭಿಕ್ಷುಕರಿಗೋಸ್ಕರ ಒಂದು ಅನಾಥಾಶ್ರಮವನ್ನು ಸ್ಥಾಪಿಸಿದಳು. ಆದರೆ ಯಾರಿಗೂ ತನ್ನ ಹೆಸರನ್ನು ತಿಳಿಸಲಿಲ್ಲ. ಈ ಆಶ್ರಮದ ಯಜಮಾನರು ಯಾರೆಂಬದು ಯಾರಿಗೂ ತಿಳಿಯಲಿಲ್ಲ. ಇದರ ಹೆಸರೇ ನಿಜವಾದ ದಾನವು, ಧರ್ಮವು, ತ್ಯಾಗವು. ಇದರ ಹೆಸರೇ ನಿಜವಾದ ವೈರಾಗ್ಯವು. ನರ-ನಾರಿಯರು ದಯಾರ್ದ್ರಚಿತ್ತರಾಗಿ ಯಾವಾಗ ಭೋಗವಾಸನೆಗಳನ್ನು ತ್ಯಜಿಸುತ್ತಾರೋ, ಆಗಲೇ ಅವರಿಗೆ ನಿಜವಾದ ವೈರಾಗಿಗಳೆಂದು ಹೇಳಬೇಕು. ಯಾರು ಕೃಪಣತನದಿಂದಲೋ, ಅಥವಾ ಹೆಸರುವಾಸಿಯಾಗಲೋಸುಗವೋ ಭೋಗಲಾಲಸೆಯನ್ನು ದೂರೀಕರಿಸುತ್ತಾರೋ, ಅವರ ವೈರಾಗ್ಯವು ನಿಜವಾದ ವೈರಾಗ್ಯವಲ್ಲ. ವಸ್ತ್ರಭೂಷಣಗಳಿಗೋಸ್ಕರ ಯಾವ ನಾರಿಯರು ತಮ್ಮ ಪ್ರಾಣವನ್ನಾದರೂ ಎರವಿಡುತ್ತಾರೆಯೋ,

ಆ ನಾರಿಯರು ನನ್ನ ಈ ಕಥೆಯ ಸಾರವನ್ನು ಗ್ರಹಿಸಿಕೊಂಡು ತಮ್ಮ ನಾರೀಜನ್ಮವನ್ನು ಸಫಲಮಾಡುವ ನಿಯಮವನ್ನು ಅನುಸರಿಸಿಕೊಳ್ಳುವ ರೆಂದು ನಾನು ಆಶಿಸುತ್ತೇನೆ.



# ಹಿಂದೂರಮಣಿಯರ ನಿವೃತ್ತಿ-ಧರ್ಮ.



ರಮಣಿಯು ಪ್ರವೃತ್ತಿಯ ಸ್ವರೂಪಳು. ಈ ಮಾತು ನಿಜ. ಆದರೆ ಅವಳು ಬಹಳ ದೊಡ್ಡ ನಿವೃತ್ತಿರೂಪಿಣಿಯೂ ಆಗಿರುತ್ತಾಳೆ. ಪ್ರವೃತ್ತಿಯ ಅರ್ಥವು ಸಾಂಸಾರಿಕ ಸುಖಗಳಲ್ಲಿ ಆಸಕ್ತಿಯೂ, ನಿವೃತ್ತಿಯ ಅರ್ಥವು ಸಾಂಸಾರಿಕ ಸುಖಗಳಲ್ಲಿ ವೈರಾಗ್ಯವೂ ಎಂದು ತಿಳಿಯಬೇಕು. ರಮಣಿ ಯರಲ್ಲಿ ಈ ಎರಡು ಗುಣಗಳೂ ಕಂಡುಬರುತ್ತವೆ. ಇಲ್ಲಿ ಒಂದು ದೇಶ ದಲ್ಲಿ ಮಾತ್ರವೇ ಅಲ್ಲ, ಎಲ್ಲಾ ದೇಶದ ಎಲ್ಲಾ ಸಮಾಜಗಳಲ್ಲಿಯೂ ಈ ಮಾತು ಸಂಪೂರ್ಣ ಸತ್ಯವಾಗಿರುತ್ತದೆ. ಆದರೆ ಈ ಸತ್ಯವು ವಿಶೇಷ ವಾಗಿ ಹಿಂದೂಲಲನೆಯರಲ್ಲಿ ಎಷ್ಟು ಚೆನ್ನಾಗಿ ತಿಳಿದುಬರುತ್ತದೋ, ಅಷ್ಟು ಇನ್ನು ಯಾವ ದೇಶದ ರಮಣಿಯರಲ್ಲಿಯೂ ಇಲ್ಲ. ಹಿಂದೂ ರಮಣಿಯರು ಬಾಲ್ಯಾವಸ್ಥೆಯಲ್ಲಿಯೇ ಈ ಉಪದೇಶವನ್ನು ಹೊಂದು ತ್ತಾರೆ. ಇದೇ ಧರ್ಮವನ್ನು ಅನುಸರಿಸುತ್ತಾರೆ. ಹಿಂದೂಗೃಹದ ಬಾಲಕ ಮತ್ತು ಬಾಲಿಕೆಯರು ಈ ವಿಷಯದಲ್ಲಿ ಬಹಳ ಭಿನ್ನರಾಗಿರು ತ್ತಾರೆ. ಬಾಲಕರು ಭೋಗವಿಲಾಸ, ಮತ್ತು ಮನಬಂದಂತೆ ವಿಹರಿಸ ಲೋಸುಗ ಎಷ್ಟು ಕಷ್ಟಪಡುತ್ತಾರೋ, ಅಷ್ಟು ಬಾಲಿಕೆಯರಿಗಿರುವುದಿಲ್ಲ. ಬಾಲ್ಯಾವಸ್ಥೆಯಲ್ಲಿಯೇ ಮಾತೆಯು ಬಾಲಕಿಯ ಕಿವಿಯಲ್ಲಿ ಈ ಮಂತ್ರ ವನ್ನೇ ಹೇಳುತ್ತಿರುತ್ತಾಳೆ. ಬಾಲ್ಯಾವಸ್ಥೆಯಿಂದಲೇ ಬಾಲಿಕೆಯರು ಯಾವದು ಬಾಲಕರಿಗೆ ರುಚಿಸುವುದೋ, ಮತ್ತು ಬಾಲಿಕೆಯರಿಗೆ ರುಚಿಸು ವುದಿಲ್ಲವೋ, ಅದನ್ನೇ ಅಭ್ಯಾಸಮಾಡಿಕೊಳ್ಳುತ್ತಾರೆ. ಊಟ, ತಿಂಡಿ,

ಬಟ್ಟೆ-ಬರೆಗಳಲ್ಲಿಯೂ ನಡೆ-ನುಡಿಗಳಲ್ಲಿಯೂ ಇನ್ನೆಲ್ಲಾ ವಿಷಯಗಳ ಲ್ಲಿಯೂ ಬಾಲಕರ ಜೊತೆಯಲ್ಲಿ ಬಾಲಿಕೆಯರು ನಿವೃತ್ತಿಮಯಿಯರಾ ಗಿರುತ್ತಾರೆ. ಬಾಲಕಿಯರು ಬಾಲಕರಂತೆ ಇರಲಪೇಕ್ಷಿಸಿದರೆ ಮಾತೆಯು ಆಗಲೇ, "ಇಲ್ಲ ಮಗೂ! ನೀನು ಗಂಡುಹುಡುಗರ ಸರಿಸಮಾನವಾಗಿ ಹೇಗಿರುವೆ? ಅವರೇನುಮಾಡುತ್ತಾರೆಯೋ, ಅಂತೆಯೇ ನೀನು ಮಾಡಿದರೆ ಜನರು ಆಡಿಕೊಳ್ಳುವರು." ಎಂದು ಹೇಳುವಳು. ಆ ಮಾತುಗಳನ್ನು ಕೇಳಿ ಬಾಲಿಕೆಯರ ಆಚರಣೆಯು ಸರಿಯಾಗಿಹೋಗುತ್ತದೆ. ಹೇಗಂ ದರೆ—ಸಂಸಾರದಲ್ಲಿ ಬಾಲಕರಿಗೆ ಪ್ರವೃತ್ತಿಮಾರ್ಗದಲ್ಲಿಯೇ ಶೋಭೆಯಾ ದರೂ ಕೂಡ ಬಾಲಿಕೆಯರಿಗೆ ನಿವೃತ್ತಿಧರ್ಮವೇ ಉಪಯೋಗವಾಗುವುದು. ಈ ಸಮಯದಲ್ಲಿ ನಿಜವಾಗಿಯೂ ಈ ಶಿಕ್ಷಣದಲ್ಲಿ ಅಷ್ಟು ಶಕ್ತಿ ಇಲ್ಲ. ಈಗ ಬಹಳವಾಗಿ ಬಾಲಕ ಬಾಲಕಿಯರು ಜೊತೆಯಲ್ಲಿಯೇ ಸರಿ ಸಮಾನವಾಗಿ ಶಿಕ್ಷಿಸಲ್ಪಡುತ್ತಾರೆ. ಆದರೆ ನಾನು ಈ ಸಮಯದಂತಹ ಅಂಧಕಾಲದ ಮಾತನ್ನು ಹೇಳುವುದಿಲ್ಲ. ಯಾವಾಗ ದೇಶದಲ್ಲಿ ನಿಜ ವಾದ ಹಿಂದೂಗಳಿದ್ದರೋ, ಯಾವಾಗ ಹಿಂದೂ ಗೃಹಸ್ಥಾಶ್ರಮವಿತ್ತೋ, ಆ ಕಾಲದ ಮಾತನ್ನು ನಾನು ಹೇಳುತ್ತಿದ್ದೇನೆ. ಈಗಲೂ ಕೂಡ ಹಳ್ಳಿ ಪಳ್ಳಿಗಳಲ್ಲಿ ಇಂಥಾ ಗೃಹವರ್ತನವು ಕಾಣಬರುತ್ತದೆ. ಅದೇ ಪುರಾತನ ಕಾಲದ ಸ್ಮೃತಿಯನ್ನೂ ಅದೇ ಪುರಾತನ ಹಿಂದೂಗೃಹಗಳ ಮಾತನ್ನೂ ಯೋಚಿಸಿ ಹೇಳುತ್ತಿದ್ದೇನೆ. ನಾನು ನನ್ನ ಕಣ್ಣುಗಳಿಂದ ಬಾಲಕ-ಬಾಲ ಕಿಯರ ಪೋಷಣೆಯ ರೀತಿಯನ್ನೂ ಶಿಕ್ಷಣದ ರೀತಿಯನ್ನೂ ನೋಡಿಯೇ ಈ ಮಾತನ್ನು ಬರೆಯುತ್ತಿದ್ದೇನೆ. ಒಂದು ದಿನ ನಡೆದ ಮಾತನ್ನು ಈಗ ತಮ್ಮಲ್ಲಿ ಹೇಳಿಕೊಳ್ಳುತ್ತೇನೆ.

ಏನಂದರೆ—ಒಂದು ದಿನ ಯಾವುದೋ ಒಂದು ಗೃಹದಲ್ಲಿ ಬಾಲಕ ಬಾಲಿಕೆಯರು ತುಪ್ಪ, ಸಕ್ಕರೆ, ರೊಟ್ಟಿಯನ್ನು ತಿನ್ನಲೋಸುಗ ಅಳಲಾ ರಂಭಿಸಿದರು. ಗೃಹಿಣಿಯು ಮೊತ್ತಮೊದಲು ಇಬ್ಬರಿಗೂ ಸಮಾಧಾನ ಹೇಳಲಾರಂಭಿಸಿದಳು. ಮತ್ತೆ ಬಾಲಕನಿಗೆ ತುಪ್ಪ, ಸಕ್ಕರೆ, ರೊಟ್ಟಿ ಯನ್ನು ಕೊಟ್ಟು ಮಗಳಿಗೆ ರೊಟ್ಟಿಯನ್ನು ಕೊಟ್ಟು, "ಮಗೂ! ಇದೇನು

ನೀನು ಹೇಳುತ್ತಿರುವುದು? ಹುಡುಗಿಯರು ಸಾಮಾನ್ಯವಾಗಿ ಎಲ್ಲಿಯಾ ದರೂ ತುಪ್ಪ ಸಕ್ಕರೆ ತಿನ್ನುತ್ತಾರೆಯೇ?'' ಎಂದು ಹೇಳಿ ಕಡೆಗೆ ತುಪ್ಪ ಸಕ್ಕರೆಯನ್ನು ಕೊಟ್ಟಳು. ಆದರೆ ಅವಳ ಮಾತಿನ ಶಿಕ್ಷಣೆಯು ಆ ಬಾಲಿಕೆಯ ಮನಸ್ಸಿನಲ್ಲಿ ಅವಳ ಹೃದಯದಲ್ಲಿ ಅಕ್ಷರಶಃ ಎಲ್ಲಾ ಕಡೆಯ ಲ್ಲಿಯೂ ಅಂಕಿತವಾಗಿಹೋಯಿತು. ಅವಳು ತನ್ನ ಇಡೀ ಜನ್ಮದ ಲ್ಲಿಯೂ ಆ ಮಾತನ್ನು ಮರೆಯಲಿಲ್ಲ. ಇಂಥಾ ನಿವೃತ್ತಿಮಯವಾದ ಶಿಕ್ಷಣವು ಹಿಂದೂಗಳ ಮನೆಯಲ್ಲಿ ಹಿಂದೂಬಾಲಿಕೆಯರಿಗೆ ಸಿಗುತ್ತಿತ್ತು. ಬಾಲ್ಯಾವಸ್ಥೆಯಿಂದಲೇ ಬಾಲಿಕೆಯರು ಭೋಜನಾದಿಗಳಲ್ಲಿಯೂ ಸಂಯ ಮದ ಶಿಕ್ಷಣವನ್ನು ಪಡೆಯುತ್ತಾರೆ.

ನಾನು ಇದುವರೆಗೆ ಪಿತೃಗೃಹದ ಮಾತನ್ನು ಹೇಳಿದೆನು. ಇನ್ನು ಪತಿಗೃಹದ ಮಾತನ್ನು ಸ್ವಲ್ಪ ಹೇಳುತ್ತೇನೆ. ಹಿಂದೂಕನ್ಯೆಯರ ವಿವಾ ಹವು ಬಾಲ್ಯಾವಸ್ಥೆಯಲ್ಲಿಯೇ ಆಗುತ್ತದೆ. ಅವಳು ಪತಿಗೃಹದಲ್ಲಿಯೂ ಸಂಯಮದ ಅಭ್ಯಾಸವನ್ನು ಮಾಡುತ್ತಾಳೆ. ಅಲ್ಲಿಯೂ ಕೂಡ ಅವಳಿಗೆ ಎಲ್ಲಾ ವಿಷಯದಲ್ಲಿಯೂ ಸಂಯಮವ್ರತವನ್ನೇ ಪಾಲಿಸಬೇಕಾಗುತ್ತದೆ. ಮೊದಲು ಮಾತೆಯ ಬಳಿಯಲ್ಲಿ ಅವಳ ಹೇಳುವಿಕೆಯ ಮಾತನ್ನು ಕೇಳಿ ಕಲಿಯಬೇಕಾಗುತ್ತಿತ್ತು. ಈ ಅತ್ತೆ ಮಾವರ ಬಳಿಯಲ್ಲಿ ಕೆಲಸಮಾಡಿ ಅದೇ ಶಿಕ್ಷಣವನ್ನು ಅಭ್ಯಾಸಮಾಡಬೇಕಾಗುತ್ತದೆ. ಆಹಾ! ಅದು ಎಂಥಾ ಶಿಕ್ಷಣೆಯು? ಎಂಥಾ ಅಭ್ಯಾಸವು? ಒಂದು ಕೂದಲಷ್ಟಾದರೂ ಆಚೆದ್ದು ಈಚೆ, ಈಚೆದ್ದು ಆಚೆ ಆಗಲಾರದು. ಇಂಥಾ ತೀವ್ರವಾಗಿ ಪ್ರಕಾಶಿಸುತ್ತಿರುವ ಶಿಕ್ಷಣವು ಬಹಳಮಾಡಿ ಯಾವ ಸಮಾಜದಲ್ಲಿಯೂ ಇರಲಾರದು.

ಇದುವರೆಗೆ ನಾನು ಬಾಲಿಕಾವಧುವಿನ ವಿಷಯವಾಗಿ ಭೋಜನಾದಿ ಸಂಯಮದ ಮಾತನ್ನು ಹೇಳಿದೆನು. ಈಗ ನಾನು ಯುವತೀವಧುವಿನ ವಿಷಯವಾಗಿ ಮಾತನ್ನು ಹೇಳುತ್ತೇನೆ. ಬಾಲಿಕಾವಧುವು ಯಾವ ಸಮ ಯದಲ್ಲಿ ಯುವತೀವಧುವಾಗುವಳೋ, ಆಗಲೇ ಹಿಂದೂಪತ್ನಿಯು ಹಿಂ ದೂಪತಿಯನ್ನು ಗುರುತಿಸುವಳು. ಆ ಕೂಡಲೇ ಅವಳ ಪೂರ್ವಶಿಕ್ಷಣವು

ಕಾರ್ಯದಲ್ಲಿ ಪರಿಣಮಿಸಲಾರಂಭಿಸುವುದು. ಮೊದಲು ಅವರು ತಾಯಿ, ಅತ್ತೆ, ಮಾವ ಇವರುಗಳ ಶಾಸನ ಮತ್ತು ಉಪದೇಶವಾಕ್ಯಗಳ ನಿವೃತ್ತಿ ಧರ್ಮವನ್ನು ಅನುಷ್ಠಾನಿಸುತ್ತಿದ್ದರೋ, ಅದು ಈಗ ತನಗೆತಾನೆ ಮನದಿಂದ ಹೊರಸೂಸುವಂತಾಯಿತು. ಮೊದಲು ಯಾವ ಶಿಕ್ಷಣವು ಅಂಶತಃ ಸಿಕ್ಕಿತ್ತೊ, ಅದೇ ಶಿಕ್ಷಣವು ಈಗ ಪೂರ್ಣರೂಪವನ್ನು ಹೊಂದಿದಂತಾಯಿತು. ಬಾಲಿಕೆಯಾದ ಹಿಂದೂಪತ್ನಿಯು ಯೌವನದ ಎಲ್ಲಾ ಪ್ರವೃತ್ತಿ ಧರ್ಮಗಳನ್ನೂ ತನ್ನ ಸ್ವಾಮಿಯ ಚರಣಕಮಲಗಳಿಗೆ ಅರ್ಪಿಸಿಬಿಟ್ಟಳು. ಆಗ ಹಿಂದೂರಮಣಿಯು ತನ್ನ ಸುಖಕ್ಕೋಸ್ಕರ ಏನುಮಾಡುವುದನ್ನೂ ಕಲಿಯಲಾರಳು. ತನ್ನ ಎಲ್ಲಾ ಸುಖವನ್ನು ಪತಿಯ ಸುಖದ ಧಾರೆಯಲ್ಲಿ ಸೇರಿಸುವುದಕ್ಕೆ ಕಲಿಯುವಳು. ತನ್ನ ಎಲ್ಲಾ ಪ್ರವೃತ್ತಿಯನ್ನು ತನ್ನ ಪತಿಯ ಪ್ರವೃತ್ತಿಮಂದಿರದಲ್ಲಿ ಬಲಿದಾನವನ್ನು ಕೊಡಲು ಕಲಿಯಲಾರಂಭಿಸುವಳು. ಭೋಜನವಾಗಲೀ, ವಸ್ತ್ರವಾಗಲೀ, ಅಥವಾ ದುರ್ಜಯವಾದ ಇಂದ್ರಿಯಸುಖಗಳನ್ನಾಗಲೀ ಹಿಂದೂಪತ್ನಿಯು ಎಲ್ಲಾ ವಿಷಯಗಳನ್ನೂ ತನ್ನ ಪತಿಯ ಚರಣದಲ್ಲಿ ಸಮರ್ಪಣೆಮಾಡಿ ನಿಶ್ಚಿಂತಳಾಗುತ್ತಾಳೆ. ಈ ಸಂಯಮಶಿಕ್ಷಣವೆಂಬದು ಸುಲಭಸಾಧ್ಯವಲ್ಲ. ಆದರೆ ಹಿಂದೂ ಸ್ತ್ರೀಯರು ಇದುವರೆಗೂ ಇದನ್ನೇ ಕಲಿಯುತ್ತಿದ್ದರು.

ಯುವತೀವಧುವಿನ ಮಾತಾಯಿತು. ಇನ್ನು ಹಿಂದೂಪತ್ನಿಯ ಎರಡನೇ ವಿಷಯವನ್ನು ಹೇಳುತ್ತೇನೆ. ನನ್ನ ತಿಳುವಳಿಕೆಗೆ ಹಿಂದೂರಮಣಿಯರ ನಿವೃತ್ತಿಧರ್ಮವು ಇಲ್ಲಿ ಇನ್ನು ಒಂದು ಸೋಪಾನವೇರಿರುತ್ತದಾಗಿ ತಿಳಿದುಬರುತ್ತದೆ. ನೋಡಿರಿ, ಆ ಹಿಂದೂಪತ್ನಿಯು ಈಗ ಮಾತೆಯಾಗಿ ನವಕುಮಾರನನ್ನು ಪಾಲನ ಪೋಷಣಮಾಡುತ್ತಿದ್ದಾಳೆ. ತನ್ನ ಭೋಜನದ ಚಿಂತೆಯಿಲ್ಲ, ನಿದ್ರೆಯ ಧ್ಯಾನವಿಲ್ಲ, ಮತ್ತು ಸುಖ ಸ್ವಾರ್ಥಗಳ ಕಡೆಗೆ ದೃಷ್ಟಿಯೂ ಇಲ್ಲ. ಮಾತೆಯು ಎಲ್ಲವನ್ನೂ ತ್ಯಜಿಸಿ ಸಂತಾನದ ಮಲಮೂತ್ರಗಳಲ್ಲಿ ಒದ್ದಾಡಿಕೊಂಡು ತನ್ನ ನವಕುಮಾರನಿಗೆ ಸುಖ ಕೊಡಲೋಸುಗ ತನ್ನ ಶಕ್ತಿಯೆನ್ನೆಲ್ಲಾ ಅರ್ಪಿಸುತ್ತಿದ್ದಾಳೆ. ಹಿಂದೂರಮಣಿಯರ ಈ ನಿವೃತ್ತಿಧರ್ಮದ ಸೋಪಾನವು ಎಷ್ಟು ಮನೋಹರವಾಗಿದೆ!

ಈ ಸೋಪಾನದ ಮೇಲೆ ಇದ್ದ ಇನ್ನೊಂದು ಸೋಪಾನವನ್ನು ಈ ದಿನ ನಾನು ನಿಮಗೆ ಒಳ್ಳೇ ರೀತಿಯಲ್ಲಿ ತೋರಿಸಲಾರೆನು. ಆದರೂ ಕೂಡ ಆ ವಿಷಯದ ಮಾತನ್ನು ಸ್ವಲ್ಪ ಹೇಳುತ್ತೇನೆ. ಅದೋ ನೋಡಿರಿ! ಹಿಂದೂವಿಧವೆಯು ತನ್ನ ಸ್ವಾಮಿಯ ಜೊತೆಯಲ್ಲಿ ಸಾಯುತ್ತಿದ್ದಾಳೆ. ಅಪಾರವಾದ ಧನ, ಸಂಪತ್ತು, ದುರ್ಜಯವಾದ ಭೋಗವಾಸನಾ ಮತ್ತು ಜೀವಕ್ಕಿಂತಲೂ ಅಧಿಕವಾದ ಬಾಲಕ ಬಾಲಕಿಯರನ್ನು ಬಿಟ್ಟು, ಅದೋ ನೋಡಿರಿ! ಆ ಹಿಂದೂವಿಧವೆಯು ನಗುತ್ತಾ ನಗುತ್ತಾ ಪತಿಯ ಮೃತ ಶರೀರವನ್ನು ಅಪ್ಪಿಕೊಂಡು ಧಗಧಗಾಯಮಾನವಾಗಿ ಉರಿಯುತ್ತಿರುವ ಅಗ್ನಿಜ್ವಾಲೆಯಲ್ಲ ಕೋಮಲಕಾಯವನ್ನು ಭಸ್ಮೀಕರಿಸುತ್ತಿದ್ದಾಳೆ. ನಾನು ಹಿಂದೂರಮಣಿಯರನ್ನು ಇಡೀ ಜಗತ್ತಿನ ನಾರಿಯರಲ್ಲಿ ಶ್ರೇಷ್ಠರಾದ ನಿವೃತ್ತಿಮಯಿಯರೆಂದು ಯಾಕೆ ಹೇಳುತ್ತೇನೆಂಬದನ್ನು ಇನ್ನೂ ತಿಳಿಸ ಬೇಕಾದೀತೇನು?

ಆದರೆ ಹಿಂದೂರಮಣಿಯರ ನಿವೃತ್ತಿ-ಧರ್ಮದ ಅಂತಿಮ ವಿಕಾಸ ವಾಗಲಿ ಪ್ರಕಾಶವಾಗಲಿ ಈಗಿರುವುದಿಲ್ಲ. ಹಿಂದೂರಮಣಿಯರ ಬಾಲ್ಯಾ ವಸ್ಥೆಯಲ್ಲಿ ಮಾತಾಪಿತರ ಬಳಿಯಲ್ಲಿಯೂ, ಕಿಶೋರಾವಸ್ಥೆಯಲ್ಲಿ ಅತ್ತೆ ಮಾವಂದಿರ ಬಳಿಯಲ್ಲಿಯೂ, ಯೌವನಾವಸ್ಥೆಯಲ್ಲಿ ಪತಿಯ ಬಳಿಯ ಲ್ಲಿಯೂ, ಪ್ರೌಢಾವಸ್ಥೆಯಲ್ಲಿ ಸಂತಾನದ ಪಾಲನ ಪೋಷಣದ ಮಧ್ಯೆ ಯಾವ ನಿವೃತ್ತಿಧರ್ಮದ ಶಿಕ್ಷಣ ಮತ್ತು ಅಭ್ಯಾಸವನ್ನು ಮಾಡಿದ್ದಳೋ, ಅದರ ಅಂತಿಮ ಮತ್ತು ಸರ್ವೋಚ್ಚವಾದ ಪ್ರಕಾಶವು ಇಲ್ಲಿ ಅದೇ ಹಿಂದೂವಿಧವಾರಮಣಿಯರಲ್ಲಿದೆ. ಈ ಎಲ್ಲಾ ಶಿಕ್ಷಣವನ್ನು ಎಲ್ಲಾ ಬ್ರಹ್ಮಚಾರಿಣಿಯರು ಪಡೆದಿರುವುದಿಲ್ಲವೆಂಬದು ಸತ್ಯವೇ ಹೌದು. ಆದರೂ ಕೂಡ ದೃಷ್ಟಾಂತಕ್ಕೇನೂ ಅಭಾವವಿರುವುದಿಲ್ಲ. ಅದೇ ಶಿಕ್ಷಣದ ಬಲ ದಿಂದ, ಅದೇ ದೃಷ್ಟಾಂತದ ಅನುಸರಣೆಯಿಂದ ಹಿಂದೂವಿಧವೆಯು ನಿವೃತ್ತಿಧರ್ಮದ ಪರಕಾಷ್ಠತೆಯನ್ನು ತೋರಿಸಲು ಸಮರ್ಥಳಾಗುವಳು. ಸಂಸಾರವನ್ನು ತ್ಯಜಿಸಿರುವ ಸನ್ಯಾಸಿಯ ನಿವೃತ್ತಿಧರ್ಮದ ಜ್ಯೋತಿಯೂ ಕೂಡ ಸಂಸಾರಮಧ್ಯದಲ್ಲಿ ವಿಹರಿಸುತ್ತಿರುವ ಬ್ರಹ್ಮಚಾರಿಣಿಯ ನಿವೃತ್ತಿ

ಧರ್ಮದ ಮುಂದೆ ಮಂದಪ್ರಕಾಶವುಳ್ಳದ್ದಾಗುವುದು. ಆದುದರಿಂದ ಎಲ್ಲಾ ನಾರೀಜಾತಿಯು ನಿವೃತ್ತಿಮಯಿಯೆಂದೂ, ಅದರಲ್ಲಿಯೂ ಹಿಂದೂ ರಮಣಿಯರು ಸರ್ವಶ್ರೇಷ್ಠರೆಂದೂ ನಾನು ಹೇಳುತ್ತಿರುವುದು. ಆದರೆ ಸಮಯದ ಪ್ರವಾಹವು ಬದಲಾಯಿತು. ಅವಿದ್ಯೆಯಿಂದಲೂ, ಧಾರ್ಮಿಕ ಶಿಕ್ಷಣದ ಅಭಾವದಿಂದಲೂ ಕಾಲವು ವ್ಯತ್ಯಸ್ತವಾಗಿದೆ. ಆದುದರಿಂದ ಈ ನಿವೃತ್ತಿಧರ್ಮದ ಆದರ್ಶವು ಭಾರತದಿಂದ ಏಳಹತ್ತಿದೆ. ಬಹುಶಃ ಈಗ ಪಾಪ ತಾಪಗಳಿಂದ ತುಂಬಿದ ಸಂಸಾರದಲ್ಲಿ ಆ ಪತಿಯಿಂದಗಲಿದ ಸನ್ಯಾಸಿನಿಯೂ, ಪತಿಯಿಂದ ಕೂಡಿದ್ದರೂ ನಿವೃತ್ತಿಸ್ವರೂಪಿಣಿಯರಾದ ಗೃಹಿಣಿಯರೂ ಈಗ ಉಳಿಯಲಿಲ್ಲ. ಇದರ ದುಃಖವು ನನಗೆ ಏಕೆ ಎಂಬ ದನ್ನು ಇಲ್ಲಿ ನಾನು ಸಂಕ್ಷೇಪವಾಗಿ ಹೇಳುತ್ತೇನೆ.

ಈಗ ನಾನು ರಮಣಿಯರಿಗೆ ಸಮತೆ ಅಥವಾ ಸಾಮ್ಯವನ್ನು ತೋರಿ ಸಲು ಆರಂಭಿಸಿದ್ದೇನೆ. ರಮಣಿಯನ್ನು ಪುರುಷನನ್ನಾಗಿ ಮಾಡುವುದೂ, ಬಾಲಿಕೆಯನ್ನು ಬಾಲಕನನ್ನಾಗಿ ಮಾಡುವುದೂ, ನಾನು ಯಾವ ಇಷ್ಟ ದಿಂದ ಹೀಗೆ ಮಾಡುತ್ತಿದ್ದೇನೆ? ಈ ನನ್ನ ಅಭೀಷ್ಟವು ದುಷ್ಟಹೇತುವಾ ಗಿರುವುದೇನು? ಇಲ್ಲ. ನಾನೇನು ನಿರ್ದಯನಾದ ಸ್ವಾರ್ಥಿಯಾದಕಾರಣ ಹೀಗೆ ಮಾಡುತ್ತಿದ್ದೇನೆಯೋ? ಅದು ಕೂಡ ಅಲ್ಲ. ಈ ಕೆಲಸವು ನನ್ನ ಭ್ರಾಂತಿಯಿಂದಲೇ ಆಗುತ್ತಿದೆ. ಅದನ್ನು ಬಿಡಿಸಿ ಹೇಳುತ್ತೇನೆ.

ನಾವು ಎಣಿಸುತ್ತೇವೇನಂದರೆ—ನಾವು ಹೇಗೆ ಸ್ವಾಧೀನರೋ, ಹೇಗೆ ಪ್ರವೃತ್ತಿಧರ್ಮಿಗಳೋ, ಅದೇ ರೀತಿ ರಮಣಿಯರು ಇಲ್ಲದಿದ್ದರೆ ಅವರಿಗೆ ದುಃಖವಾಗುತ್ತಿರಬಹುದು. ಇಂಗ್ಲಿಷರು ಯಾವ ರೀತಿ ನಾವು ಗಳು (ಭಾರತೀಯರು) ಅವರಂತೆ ಇಲ್ಲದ್ದರಿಂದ ಎಲ್ಲಾ ವಿಷಯಗಳಲ್ಲಿ ದುಃಖಿಗಳೆಂದು ತಿಳಿಯುತ್ತಾರೆಯೋ, ಯಾವ ರೀತಿ ನಾವುಗಳು ದರಿದ್ರ ರಾದ ಕೃಷಿಕರನ್ನು ನೋಡಿ ಉಪ್ಪನ್ನವನ್ನು ತಿನ್ನುವುದರಿಂದ ಅವರಿಗೆ ದುಃಖವಾಗುತ್ತಿರಬಹುದೆಂದು ಎಣಿಸುತ್ತೇವೆಯೋ, ಕೃಷಿಕರು ಸನ್ಯಾಸಿ ಗಳನ್ನು ನೋಡಿ ಬರೀ ಹಾಲು ಕುಡಿದು ಇರಬೇಕಾದುದರಿಂದ ದುಃಖ ವಾಗುತ್ತಿರಬಹುದೆಂದು ಎಣಿಸುತ್ತಾರೆಯೋ, ಅದೇ ರೀತಿ ನಾವೂ ಕೂಡ

ಇಂಥಾ ಸಂಯಮಿಯಾದಶೆಯಲ್ಲಿರುವುದು ಹಿಂದೂರಮಣಿಯರಿಗೆ ದುಃಖವಾಗಬಹುದೆಂದು ಎಣಿಸುತ್ತೇವೆ. ಇದೇ ಮೋಹದಿಂದ ಇದೇ ಅನುಕರಣದ ಭ್ರಾಂತಿಯಿಂದ ನಾವುಗಳು ನಮ್ಮ ಜೊತೆಯಲ್ಲಿ, ಪ್ರವೃತ್ತಿಯ ಧಾರೆಯಲ್ಲಿ ಪ್ರವಹಿಸುವಂತೆ ಮಾಡುತ್ತಿದ್ದೇವೆ. ಬಾಲ್ಯಾವಸ್ಥೆಯ ಶ್ರೇಷ್ಠವಾದ ಶಿಕ್ಷಣದಿಂದಲೂ, ಶ್ರೇಷ್ಠವಾದ ಅಭ್ಯಾಸಬಲದಿಂದಲೂ ಆ ರಮಣಿಯರು ನಮ್ಮಿಂದ ಸಾವಿರಪಾಲು ಹೆಚ್ಚಾಗಿ ಸಂಯಮಿನಿಯರಾಗುತ್ತಾರೆಂಬದನ್ನು ನಾವು ತಿಳಿಯುವುದಿಲ್ಲ.

ನಾವು ಯಾವದನ್ನು ದುಃಖವಾಗಿ ಎಣಿಸುತ್ತೇವೆಯೋ, ಅವರು ಅದನ್ನು ದುಃಖವಾಗಿ ಎಣಿಸುವುದಿಲ್ಲ. ಹಿಂದೂಪತ್ನಿಯು ಹಿಂದೂಪತಿಗಿಂತ ಎಷ್ಟೋ ಪಾಲು ಹೆಚ್ಚಾಗಿ ಸಹನಶೀಲಳಾಗಿರುತ್ತಾಳೆ. ಸ್ವಲ್ಪ ಸ್ವಭಾವದಿಂದಲೂ, ಸ್ವಲ್ಪ ಆ ಸ್ವಭಾವವನ್ನು ವಿಕಾಸವನ್ನಾಗಿ ಮಾಡುವ ಶಿಕ್ಷಣದ ಬಲದಿಂದಲೂ ಅವರು ನಮ್ಮಗಳಿಂದ ಎಷ್ಟೋ ಅಧಿಕವಾದ ನಿವೃತ್ತಿಧರ್ಮಿಗಳಾಗಿರುತ್ತಾರೆ. ಈ ವಿಷಯವನ್ನು ನಾವು ತಿಳಿಯುವುದಿಲ್ಲ. ಆದುವರಿಂದಲೇ ನಾವು ಅವರ ಆ ಶ್ರೇಷ್ಠತರವಾದ ಧರ್ಮವನ್ನು ಕೆಳಗುರುಳಿಸಿ ನಮ್ಮ ಅಪಕೃಷ್ಟವಾದ ಧರ್ಮದ ಜೊತೆಯಲ್ಲಿ ಸರಿಸಮಾನರಾಗಿ ಮಾಡಲಿಚ್ಛಿಸುತ್ತೇವೆ. ಇದರ ಹೆಸರೇ ಸಾಮ್ಯಸ್ಥಾಪನ. ಈ ದುಃಖವನ್ನು ಯಾರಲ್ಲಿ ಹೇಳಲಿ? ಯಾರು ನಿವೃತ್ತಿಧರ್ಮವನ್ನು ಪ್ರವೃತ್ತಿಧರ್ಮಕ್ಕಿಂತ ಶ್ರೇಷ್ಠತರದ್ದಾಗಿ ಎಣಿಸುವುದಿಲ್ಲವೋ, ನಾನು ಅವರ ಮುಂದೆಯೇ ನನ್ನ ದುಃಖವನ್ನು ಹೇಳಿಕೊಳ್ಳುತ್ತೇನೆ. ನಾನು ಅವರಲ್ಲಿ ಹೇಳುವುದೇನಂದರೆ—ಎಲ್ಲಿ ಹಿಂದೂರಮಣಿಯರು ತಮ್ಮ ಪತಿಯ ಚರಣದಲ್ಲಿ ಆತ್ಮವಿಸರ್ಜನೆಮಾಡುವುದನ್ನು ನೋಡಿಕೊಂಡು ನಾವುಗಳೂ ಕೂಡ ಜಗತ್ಪತಿಯ ಚರಣಗಳಲ್ಲಿ ಆತ್ಮವಿಸರ್ಜನವನ್ನು ಮಾಡುವ ಅಭ್ಯಾಸವನ್ನು ಮಾಡಬೇಕಾಗಿತ್ತೋ, ಅದಕ್ಕೆ ಬದಲಾಗಿ ಇಲ್ಲಿ ಅವರನ್ನು ಪತಿಯಿಂದ ಬೇರೆಯಾಗಿ ಮಾಡಿ ತನಗೋಸ್ಕರ ಚಿಂತಿಸುವದನ್ನು ಕಲಿಸುತ್ತಿರುವುದು ಕಾಣಬರುತ್ತದೆ. ಹಿಂದೂರಮಣಿಯರ ನಿವೃತ್ತಿಶಿಕ್ಷಣವು ಅವರ ಮಹಿಮೆಯನ್ನು ತೋರಿಸುತ್ತದೆ. ಈ ಮಾತನ್ನು ನಾವು

ಮರೆತು ಅವರನ್ನು ಎರಡನೇ ಮಾರ್ಗದಲ್ಲಿ ಓಡಿಸಿಕೊಂಡು ಹೋಗುವ ಯತ್ನಮಾಡುತ್ತಿದ್ದೇವೆ.

ಅಶ್ವತ್ಥವೃಕ್ಷದ ಬೇರು ವೃಕ್ಷದ ಕೆಳಗೆ ನಾಲ್ಕು ಕಡೆಯಲ್ಲಿಯೂ ಹೇಗೆ ಹರಡಿಕೊಂಡಿರುತ್ತದೋ, ಅದೇ ರೀತಿ ಹಿಂದೂರಮಣಿಯರ ಶಿಕ್ಷಣವು ನಾಲ್ಕು ಕಡೆಯೂ ನಿಬದ್ಧವಾಗಿದೆ. ನಾವು ಈ ಮಾತನ್ನು ಮರೆತು ಅವರ ಶಿಕ್ಷಣವನ್ನು ಹಿಡಿದೆಳೆದು ಸೆಳೆಯುತ್ತಿದ್ದೇವೆ. ಈ ವೃಕ್ಷವನ್ನು ಇನ್ನು ಯಾವ ರೀತಿಯಲ್ಲಿ ನೆಟ್ಟರೆ? ಇನ್ನೆಷ್ಟು ಸುಂದರವಾಗಿ ಕಾಣಬರುವುದು? ಎಂದು ನಾವು ಎಣಿಸುತ್ತೇವೆ. ಆದುದರಿಂದಲೇ ನಾವು ವೃಕ್ಷದ ಬೇರನ್ನು ಕಿತ್ತು ಅಲುಗಾಡಿಸುತ್ತಿದ್ದೇವೆ. ಆದರೆ ನಿರ್ಜೀವ ವೃಕ್ಷವು ಒಂದು ಕಡೆ ಬೇರನ್ನು ಕಿತ್ತುದ್ದರಿಂದಲೂ ಮತ್ತೊಂದು ಕಡೆ ನಮ್ಮ ಎಳೆತದ ಕಾರಣದಿಂದಲೂ ದಿನದಿನಕ್ಕೂ ನೀರಸವಾಗಿ ಶೋಭಾಹೀನವಾಗಿ ಹೋಗಹತ್ತಿದೆ. ಈ ವಿಷಯವನ್ನು ನಾವು ಯಾರೂ ನೋಡುವುದಿಲ್ಲ.

ನಿವೃತ್ತಿಧರ್ಮದ ಮೂಲಮಂತ್ರವು ಆತ್ಮಸುಖವನ್ನು ಅಥವಾ ಆತ್ಮಸುಖದ ಚೇಷ್ಟೆಯನ್ನು ವಿಸರ್ಜಿಸುವುದಾಗಿದೆ. ಈ ಆತ್ಮವಿಸರ್ಜನೆಯು ಜ್ಞಾನಿಗೇನು, ಪ್ರೇಮಿಗೇನು, ಇಬ್ಬರಿಗೂ ಮುಖ್ಯವಾದ ಲಕ್ಷ್ಯವು. ಈ ಆತ್ಮವಿಸರ್ಜನೆಯೇ ಯೋಗಿಯ ಯೋಗಲಕ್ಷ್ಯವು, ಭಕ್ತನ ಸೇವೆಯ ಲಕ್ಷ್ಯವು. ಮೊದಲು ಹಿಂದೂರಮಣಿಯು ಬಾಲ್ಯಾವಸ್ಥೆಯಲ್ಲಿ ಮನೆಯಲ್ಲಿದ್ದುಕೊಂಡು ನಿವೃತ್ತಿಶಿಕ್ಷಣವನ್ನು ಅಭ್ಯಾಸ ಮಾಡುತ್ತಿದ್ದಳು. ಈ ಅಭ್ಯಾಸದ ಅವಸರವನ್ನಾದರೂ ಹಿಂದೂಸಮಾಜವು ಅವರಿಗೆ ಕೊಟ್ಟಿತ್ತು. ಅವರಿಗೆ ಸಂಸಾರದ ಸಾರ್ಥವನ್ನು ಕಲಿಯಬೇಕಾಗಿರಲಿಲ್ಲ. ಅವರು ಮನೆಯಲ್ಲಿದ್ದುಕೊಂಡು ಈ ಆತ್ಮವಿಸರ್ಜನೆಯ ಅಭ್ಯಾಸದಲ್ಲಿ ಪಕ್ವವಾಗುತ್ತಿದ್ದರು. ಮತ್ತು ತಮ್ಮ ಪತಿ, ಪುತ್ರರನ್ನು ಕೂಡ ಈ ಧರ್ಮದಲ್ಲಿಯೇ ನಡಿಯುವಂತೆ ಯತ್ನಿಸುತ್ತಿದ್ದರು. ಆದರೇನು ಈಗ ಎಲ್ಲಾ ಕೆಲಸವು ಹಿಂದುಮುಂದಾಗುತ್ತಿದೆ. ಈಗ ಹಿಂದೂಮಾತಾಪಿತರು ಬಾಲಿಕೆಯರಿಗೆ ಬಾಲಕರ ಕೆಲಸವನ್ನು ಕಲಿಸು

ತ್ತಾರೆ. ಥಳ ಥಳ ಹೊಳೆಯುತ್ತ ಜ್ವಲಿಸುತ್ತಿರುವ ಭೋಗವಿಲಾಸವನ್ನು ಮತ್ತು ಸ್ವಾಧೀನತೆಯ ದಾರಿಯನ್ನು ಅವರ ಮುಂದೆ ತಂದಿಡುತ್ತಾರೆ. ಈಗ ಹಿಂದೂಪತ್ನಿಯರು ಮೊದಲಿನಂತೆ ಪತಿಯ ಚರಣದಲ್ಲಿ ಆತ್ಮವಿಸರ್ಜನೆಯನ್ನು ಮಾಡಲಾರರು. ಯಾಕಂದರೆ---ಅವರ ಪತಿಯು ಅವರಿಗೆ ಹೀಗೆ ಮಾಡುವದನ್ನು ತಡೆಯುತ್ತಾನೆ. ಮತ್ತೆ ಉಳಿದದ್ದು ಸಂತಾನ ಪಾಲನ; ಅದು ಈಗ ದಾಸ ದಾಸಿಯರ ಕೆಲಸವಾಗಿಹೋಗಿದೆ. ಮತ್ತು ಬ್ರಹ್ಮಚರ್ಯವೆಂಬದು ಬಾಯಿಯಿಂದ ಎತ್ತುವುದು ಕೂಡ ಲಜ್ಜೆಯಾಗಿ ಭಾವಿಸಲ್ಪಡುತ್ತದೆ. ಆದುದರಿಂದಲೇ ನಾನು ಹೇಳುತ್ತಿದ್ದದ್ದು ಏನಂದರೆ---ಆ ಗೃಹಿಣಿ, ಆದರೆ ಸನ್ಯಾಸಿನೀ--ಆ ಕಾರ್ಯಾನುಷ್ಠಾನದಲ್ಲಿ ತತ್ಪರಳೂ--ಆದರೆ ನಿವೃತ್ತಿಮಯಿ ಇಂಥಾ ರಮಣಿಯರು ದಿನದಿನಕ್ಕೂ ಭಾರತದಿಂದ ಅಂತರ್ಧಾನರಾಗಿ ಹೋಗುತ್ತಿದ್ದಾರೆ. ಈ ದುಃಖವನ್ನು ಯಾರಲ್ಲಿ ಹೇಳಿಕೊಳ್ಳಲಿ?

ಆದರೂ ಆಶೆಯಿದೆ. ಹಿಂದೂರಮಣಿಯೇ! ನಿನ್ನ ಮುಖದ ಕಡೆಗೆ ನೋಡಿ ಈಗಲೂ ಆಶೆಯಿದೆ. ನಿನ್ನ ಆ ಶಿಕ್ಷಣವು ಒಂದು ದಿನದ ಶಿಕ್ಷಣವಲ್ಲ. ಒಂದು ಭಾವದ ಶಿಕ್ಷಣವು ಕೂಡ ಅಲ್ಲ. ನಿನ್ನ ಆ ಶಿಕ್ಷಣೆಯು ಏನೂ ಇಲ್ಲದಂತೆ ಸುಲಭದಲ್ಲಿ ಲುಪ್ತವಾಗಿ ಹೋಗಲಾರದು. ಸ್ವಲ್ಪ ದಿನಗಳ ವರೆಗೆ ಈಗಿನ ನಮ್ಮ ಹೊಸ ಶಿಕ್ಷಣದ ಪ್ರಯತ್ನದ ಜೊತೆಯಲ್ಲಿ ಆ ಹಳೇ ಶಿಕ್ಷಣದ ಜಗಳವಾಗುವುದು. ಈ ಜಗಳದ ಕಾರಣದಿಂದಲೇ ಸುಮ್ಮಸುಮ್ಮನೇ ಬಹಳ ಜೀವಗಳ ಹತ್ಯೆಯಾಯಿತು, ಆಗುತ್ತಿದೆ, ಮತ್ತು ಆಗುವ ಸಂಭವವೂ ಉಂಟು. ಇದೇ ದುಃಖದ ಮಾತು.



## ಘರದೆಯ ಉತ್ಪತ್ತಿ-"ಘೋಷಾ."



ಮುಸಲ್ಮಾನೀ ಧರ್ಮವನ್ನು ನಡೆಸುತ್ತಿದ್ದ ಹಜರತ್ ಮುಹಮ್ಮದನು ಘರದೆಯ ರೀತಿಯನ್ನು ನಡಿಸಿದನು. ಬಹಳವಾದ ಸತ್ಯ ಪ್ರೇಮಿ

ಐತಿಹಾಸಿಕಗಳಲ್ಲಿ ಇದರ ಸಮ್ಮತಿಯಿದೆ. ಮಹಮ್ಮದನ ಕಾಲದಲ್ಲಿ ಅರಬದೇಶದಲ್ಲಿ ಸ್ತ್ರೀಸ್ವಾಧೀನತೆಯು ಜಾರಿಯಲ್ಲಿತ್ತು. ಮಹಮ್ಮದನ ಪತ್ನಿಯರು ಒಂದುಸಲ ಅವನ ಅಪ್ಪಣೆಯನ್ನು ಮಾನಿಸಲಿಲ್ಲ. ಅದಕ್ಕೋಸ್ಕರ "ಅವನು ನೀವುಗಳು ಯಾರೂ ಮನೆಯಿಂದ ಹೊರಹೊರಡಲು ಕೂಡದು" ಎಂದು ಆಜ್ಞೆ ಕೊಟ್ಟನು. ಮಹಮ್ಮದನು ತನ್ನ ಪತ್ನಿಯರ ನಡೆನುಡಿಯಲ್ಲಿ ಬಹಳ ಅನುಮಾನಿತನಾಗಿದ್ದನು. "ಜೈನಬ್" ಎಂಬ ಹೆಸರಿನ ಅವನ ಪತ್ನಿಯೊಬ್ಬಳು ಏನೋ ಸ್ವಲ್ಪ ಚಪಲತೆಯನ್ನು ತೋರಿಸಿದ್ದಳು. ಅದರಿಂದ ಅವನು ಸ್ವಲ್ಪ ಅಸಮಾಧಾನವನ್ನು ತಾಳಿದನು. ಮತ್ತು ಅವಳು ಇನ್ನು ಯಾವನಾದರೂ ಪರಪುರುಷನ ದೃಷ್ಟಿಗೆ ಬೀಳಬಾರದೆಂದು ಅವಳ ಕೊಠಡಿಯ ದ್ವಾರಗಳಿಗೆ ಘರದೆ ಹಾಕಿಸಿದನು. ಮಹಮ್ಮದನು ತನ್ನ ಮೂರನೇ ಹೆಂಡತಿಯಾದ ಆಯುಷೆಯ ನಡತೆಯಲ್ಲಿಯೂ ಸ್ವಲ್ಪ ಸಂದೇಹಪಟ್ಟು ಅವಳಿಗೂ ಘರದೆಯನ್ನು ಮಾಡಿದನು ಎಂಬದಾಗಿ ತಿಳಿದುಬರುತ್ತದೆ. ಯಾವಾಗ ಹಜರತ್ ಮಹಮ್ಮದನು ಸ್ವತಃ ಈ ನಿಯಮಗಳನ್ನು ಅನುಸರಿಸಿದನೋ, ಆಗ ಅವನ ಶಿಷ್ಯರೂ ತಮ್ಮ ಸ್ತ್ರೀಯರನ್ನು ಘರದೆಯಲ್ಲಿಡಲಾರಂಭಿಸಿದರು. ಮೆಲ್ಲಮೆಲ್ಲಗೆ ಅವನ ಶಿಷ್ಯರ ಸಂಖ್ಯೆಯು ಬಹಳ ಹೆಚ್ಚಿತು. ಮತ್ತು ಅದರ ಜೊತೆಯಲ್ಲಿಯೇ ಎಲ್ಲಾ ಸ್ತ್ರೀಯರೂ ಘರದೆಯಲ್ಲಿ ಬೀಳಲಾರಂಭಿಸಿದರು. ಕಡೆಗೆ ಎಲ್ಲಾ ಮುಸಲ್ಮಾನೀ ಧರ್ಮದವರು ಘರದೆಯ ಪದ್ಧತಿಯನ್ನು ಮಾಡಿಕೊಂಡರು.

ಯಾವಾಗ ಮುಸಲ್ಮಾನರು ಭಾರತವರ್ಷದ ಮೇಲೆ ಧಾಳಿಯಿಡಲಾರಂಭಿಸಿದರೋ, ಆಗ ಇಲ್ಲಿ ಘರದೆಯ ರೀತಿಯಿರಲಿಲ್ಲ. ಮುಸಲ್ಮಾನರ ರೀತಿಯನ್ನು ಅನುಸರಿಸಲೋಸುಗವೋ, ಅಥವಾ ಮುಸಲ್ಮಾನ್ ದುರಾಚಾರಿಗಳ ಕೈಯಿಂದ ತಮ್ಮ ಯುವತಿಯರ ಮಾನರಕ್ಷಣಾರ್ಥವಾಗಿಯೋ, ಹಿಂದೂಗಳೂ ಘರದೆಯನ್ನನುಸರಿಸಿದರು. ಅಲ್ಲದಿದ್ದರೆ ಹಿಂದೂಗಳ ಆದರ್ಶವು "ಮಾತೃವತ್ ಪರದಾರೇಷು" ಎಂದಿದೆ. ಎರಡನೇ ಸ್ತ್ರೀಯನ್ನು ಮಾತೆಯೆಂದು ತಿಳಿಯುವುದೇ ಅವರ (ಹಿಂದೂಗಳ) ಪರಮ ಧರ್ಮವು. ಅಯ್ಯೋ! ಕಾಲವ್ಯತ್ಯಾಸದಿಂದ ಎಷ್ಟು ಜನ

ಪುರುಷರು ಈ ನೀತಿಯ ರಕ್ಷಣೆಯನ್ನು ಮಾಡುತ್ತಾರೆ? ಎಲ್ಲಿಯಾದರೂ ಸುಂದರಳಾದ ಸ್ತ್ರೀಯನ್ನು ನೋಡಿದಕೂಡಲೇ ಪುರುಷನು ಪಾಪದೃಷ್ಟಿಯಿಂದ ಅವಳ ಕಡೆಗೆ ನೋಡತೊಡಗುತ್ತಾನೆ. ಈ ಕಾಲದಲ್ಲಿ ನೂರರಲ್ಲಿ ತೊಂಭತ್ತು ಜನ ಅಂಥಾ ದುರಾಚಾರಿಗಳೇ ಸಿಕ್ಕುತ್ತಾರೆ. ಅವರು ನಮ್ಮ ತಾಯಂದಿರನ್ನೂ, ಅಕ್ಕತಂಗಿಯರನ್ನೂ, ಪತ್ನಿಯರನ್ನೂ ಪರರು ಇದೇ ರೀತಿ ಪಾಪದೃಷ್ಟಿಯಿಂದ ನೋಡಿದರೆ ನಮಗೆ ಎಷ್ಟು ಕಷ್ಟವಾಗುವುದೆಂಬದನ್ನು ಯೋಚಿಸುವುದಿಲ್ಲ. ನಿಜವಾದ ಮಾತೇನಂದರೆ—ಪುರುಷನು ಸ್ವಯಂ ದುಷ್ಟನಾಗಿರುತ್ತಾನೆ. ಅವರ ದುಷ್ಟತೆಯಿಂದಲೇ ಸ್ತ್ರೀಯರಿಗೂ ದುಃಖವನ್ನು ಅನುಭವಿಸಬೇಕಾಗುತ್ತದೆ. ಅಲ್ಲನಾದರೆ ಮಾತೃಸಮಾನರಾದ ಸ್ತ್ರೀಯರನ್ನು ಜಗತ್ತಿನ ಎದುರಾಗಿ ರಾಜರೂಥಿಯಿಂದ ಹೊರಪಡಿಸುವುದರಲ್ಲಿ ಯಾವ ಲಜ್ಜೆಯೂ ಇಲ್ಲ. ಈ ಕಾಲದಲ್ಲಿ ಬಾಯಿಮಾತಿನ ಜಮಾ ಖರ್ಚನ್ನು ವಿದ್ವಾಂಸರೂ ಅವಿದ್ವಾಂಸರೂ ಎಲ್ಲರೂ ತಯಾರಿಸಲು ಶಕ್ತರೆಂಬದು ನಿಜವು. ಆದರೆ ಕಾರ್ಯತಃ ಅವರು ಮನುಷ್ಯಜೀವನದ ಉದ್ದೇಶ್ಯವು ಧರ್ಮಜೀವನವೆಂಬದನ್ನು ಮರೆತುಬಿಡುತ್ತಾರೆ. ಬರೀ ಧರ್ಮವೆಂಬದೊಂದನ್ನು ಮಾತ್ರ ಬಿಟ್ಟದ್ದರಿಂದ ಸಮಾಜದಲ್ಲೆಲ್ಲಾ ದುಷ್ಟತೆಯು ಆಕ್ರಮಿಸಿದೆ. ಎಷ್ಟರ ವರೆಗೆ ಮನುಷ್ಯನು ಧರ್ಮಭಾವನೆಯನ್ನು ಸ್ವೀಕರಿಸುವುದಿಲ್ಲವೋ, ಅಷ್ಟರ ವರೆಗೆ ಘರದೆಯನ್ನು ಸ್ವಲ್ಪಸ್ವಲ್ಪಾದರೂ ಜಾರಿಯಲ್ಲಿಡಬೇಕಾದೀತು.



# ಮೈತ್ರೇಯೀಯಾಜ್ಞವಲ್ಕ್ಯಸಂವಾದ.



ಮಹರ್ಷಿಯಾದ ಯಾಜ್ಞವಲ್ಕ್ಯನು ಜನಕಪುರದಲ್ಲಿ ವೇದವನ್ನೋದಿಸುತ್ತಿದ್ದನು. ಅವನಿಗೆ ಇಬ್ಬರು ಭಾರ್ಯೆಯರಿದ್ದರು. ಒಬ್ಬಳ ಹೆಸರು ಮೈತ್ರೇಯಿ, ಇನ್ನೊಬ್ಬಳ ಹೆಸರು ಕಾತ್ಯಾಯನೀ ಎಂದಿತ್ತು. ಮೈತ್ರೇಯಿಯು ಬ್ರಹ್ಮವಿದ್ಯೆಯಲ್ಲಿ ಪಂಡಿತಳೂ, ಕಾತ್ಯಾಯನೀಯು ಗೃಹ

ಕರ್ಮದಲ್ಲಿ ಚತುರಳೂ ಆಗಿದ್ದಳು. ಯಾಜ್ಞವಲ್ಕ್ಯನು ಯಾವಾಗ ಗೃಹಸ್ಥಾಶ್ರಮವನ್ನು ಬಿಡಲಾರಂಭಿಸಿದನೋ, ಆಗ ಇಬ್ಬರು ಭಾರ್ಯೆಯರನ್ನೂ ಹತ್ತಿರ ಕರೆದು ಹೇಳುತ್ತಾನೆ, ನಾನು ಪರಿವ್ರಜನ(ವಾನಪ್ರಸ್ಥಾಶ್ರಮ)ಕ್ಕೆ ಹೋಗುತ್ತೇನೆ. ಆದಕಾರಣ ನನ್ನ ಎಲ್ಲಾ ಧನಸಂಪತ್ತಿಗಳನ್ನೂ ನಿಮ್ಮಿಬ್ಬರಿಗೆ ಹಂಚಿಕೊಡಲಿಚ್ಛೈಸುತ್ತೇನೆ.

**ಮೈತ್ರೇಯಿ:**— ಭಗವನ್! ಒಂದುವೇಳೆ ಅರ್ಥದಿಂದ ತುಂಬಿದ ಪೃಥ್ವಿಯೆಲ್ಲಾ ನನಗೆ ಸಿಕ್ಕಿಬಿಟ್ಟರೆ ನನಗೇನು ಅಮರತ್ವ ಸಿಕ್ಕಿಬಿಡುವುದೇ?

**ಯಾಜ್ಞವಲ್ಕ್ಯ:**— ಇಲ್ಲ, ಧನವಂತನಾದ ಮನುಷ್ಯನ ಜೀವನವು ಯಾವ ರೀತಿ ನಡೆಯುವುದೋ, ಅದೇ ರೀತಿ ನಿನ್ನ ಜೀವನವೂ ಸಾಗುವುದು. ವಿತ್ತದಿಂದ ಅಮರತ್ವವು ಬರಲಾರದು.

**ಮೈತ್ರೇಯಿ:**— ಯಾವ ವಸ್ತುವಿನಿಂದ ನನಗೆ ಅಮರತ್ವವು ಸಿಗಲಾರದೋ, ಅದನ್ನು ತೆಗದುಕೊಂಡು ನಾನೇನು ಮಾಡುವುದು? ಭಗವನ್! ಅಮರತ್ವವನ್ನು ಪಡೆಯುವ ಉಪಾಯವನ್ನು ತಾವು ತಿಳಿದಷ್ಟನ್ನು ನನಗೆ ಹೇಳಿರಿ.

**ಯಾಜ್ಞವಲ್ಕ್ಯ:**— ನೀನು ನನ್ನ ಪ್ರಿಯಳು. ಮತ್ತು ಪ್ರಿಯವಾದ ಮಾತನ್ನೇ ಹೇಳುತ್ತೀ. ಅತಃ ನಿನಗೆ ಅಮರತ್ವವನ್ನು ಪಡೆಯುವ ಕ್ರಮವನ್ನು ಹೇಳುತ್ತೇನೆ. ಕೇಳು, ಮೈತ್ರೇಯಿ! ಪತಿಗೋಸ್ಕರ ಪತಿ ಪ್ರಿಯನಾಗಿರುತ್ತಾನೇನು? ಇಲ್ಲ, ಈ ಸಂಗತಿ ಇಲ್ಲ. ಆತ್ಮಾ ಅರ್ಥಾತ್ ಪರಮಾತ್ಮನಿಗೋಸ್ಕರ ಪತಿ ಪ್ರಿಯನಾಗಿರುತ್ತಾನೆ. ಭಾರ್ಯೆಗೋಸ್ಕರ ಭಾರ್ಯೆಯು ಪ್ರಿಯಳಾಗಿರುತ್ತಾಳೇನು? ಇಲ್ಲ, ಆತ್ಮಾ ಅರ್ಥಾತ್ ಪರಮಾತ್ಮನಿಗೋಸ್ಕರ ಭಾರ್ಯೆಯು ಪ್ರಿಯಳಾಗಿರುತ್ತಾಳೆ. ಮಗನಿಗೋಸ್ಕರ ಮಗನು ಪ್ರಿಯನಾಗಿರುವುದಿಲ್ಲ. ಆತ್ಮನಿಗೋಸ್ಕರವೇ ಮಗನು ಪ್ರಿಯನಾಗುತ್ತಾನೆ. ವಿತ್ತಕ್ಕೋಸ್ಕರ ವಿತ್ತವು ಪ್ರಿಯವಾಗಿರುವುದಿಲ್ಲ. ಆತ್ಮನಿಗೋಸ್ಕರವೇ ವಿತ್ತವು ಪ್ರಿಯವಾಗಿರುತ್ತದೆ. ಬ್ರಹ್ಮ, ಕ್ಷತ್ರಿಯರಿಗೋಸ್ಕರ ಬ್ರಹ್ಮ ಕ್ಷತ್ರಿಯರು ಪ್ರಿಯರಾಗಿರುವುದಿಲ್ಲ. ಅವರೂ ಕೂಡ

ಆತ್ಮನಿಗೋಸ್ಕರವೇ ಪ್ರಿಯರಾಗಿರುತ್ತಾರೆ. ಲೋಕಸಮೂಹಗಳೆಲ್ಲಾ ಲೋಕಸಮೂಹಕ್ಕೋಸ್ಕರ ಪ್ರಿಯವಾಗಿರುವುದಿಲ್ಲ. ಆತ್ಮಕ್ಕೋಸ್ಕರವೇ ಪ್ರಿಯವಾಗಿರುತ್ತವೆ. ದೇವತೆಗಳಿಗೋಸ್ಕರ ದೇವತೆಗಳು ಪ್ರಿಯರಾಗಿರುವುದಿಲ್ಲ. ಆತ್ಮಕ್ಕೋಸ್ಕರವೇ ಪ್ರಿಯರಾಗಿರುತ್ತಾರೆ. ವೇದಶಾಸ್ತ್ರಾದಿಗಳಿಗೋಸ್ಕರ ವೇದಶಾಸ್ತ್ರಾದಿಗಳು ಪ್ರಿಯವಾಗಿರುವುದಿಲ್ಲ. ಆತ್ಮಕ್ಕೋಸ್ಕರವೇ ಪ್ರಿಯವಾಗಿರುತ್ತವೆ. ಭೂತಸಮೂಹಕ್ಕೋಸ್ಕರ ಭೂತಸಮೂಹಗಳು ಪ್ರಿಯವಾಗಿರುವುದಿಲ್ಲ. ಆತ್ಮಕ್ಕೋಸ್ಕರವೇ ಭೂತಸಮೂಹಗಳು ಪ್ರಿಯವಾಗಿರುತ್ತವೆ. ಆದಕಾರಣ ಪರಮಾತ್ಮನ ದರ್ಶನ, ಶ್ರವಣ, ಮನನ, ಮತ್ತು ನಿದಿಧ್ಯಾಸನವನ್ನು ಮಾಡು. ಹೇ ಮೈತ್ರೇಯಿಯಾ! ಆತ್ಮನ ದರ್ಶನ, ಶ್ರವಣ, (ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ| ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ||) ಮತ್ತು ವಿಜ್ಞಾನಗಳಿಂದ ಈ ಮಾತುಗಳೆಲ್ಲಾ ವಿದಿತಗಳಾಗುವವು. ಪರಮಾತ್ಮನನ್ನು ತಿಳಿಯದ ವಿನಹಾ ಯಾರು ಸಂಸಾರಕಾರ್ಯವನ್ನು ನಿರ್ವಹಿಸುತ್ತಾರೋ, ಅವರು ಸ್ತ್ರೀ ಪುತ್ರಾದಿಗಳನ್ನು ಪ್ರಿಯವಾಗಿ ತಿಳಿಯುತ್ತಾರೆ. ಬ್ರಾಹ್ಮಣ್ಯ ಮತ್ತು ಕ್ಷಾತ್ರಧರ್ಮವನ್ನು ಪಾಲಿಸುತ್ತಾರೆ. ವಿಜ್ಞಾನ, ಧರ್ಮ, ದರ್ಶನ, ಶಾಸ್ತ್ರಾದಿಗಳ ಅಭ್ಯಾಸಮಾಡುತ್ತಾರೆ. ಮತ್ತು ಅವರ ಕಾರ್ಯಗಳೆಲ್ಲಾ ನಿಷ್ಫಲವಾಗಿ ಹೋಗುತ್ತವೆ.

ಈ ವಿಧವಾದ ಮಾತುಗಳಿಂದ ಯಾಜ್ಞವಲ್ಕ್ಯನು ಮೈತ್ರೇಯಿಗೆ ಏಕಮಾತ್ರ ಪರಮಾತ್ಮನೇ ಸತ್ಯ ಮತ್ತು ಪ್ರಿಯವಸ್ತುವಾಗಿದ್ದಾನೆಂಬದಾಗಿ ಉಪದೇಶಿಸಿದನು. ಅವನಿಗೋಸ್ಕರವೇ ಬೇರೆ ಎಲ್ಲಾ ವಸ್ತುಗಳೂ ಪ್ರಿಯವಾಗುತ್ತವೆ. ಯಾವ ಮನುಷ್ಯನು ಆತ್ಮನಿಂದ ಈ ವಸ್ತುಗಳನ್ನು ಬೇರೆ ಅಥವಾ ಸ್ವತಂತ್ರವಾಗಿ ದೂರೀಕರಿಸುತ್ತಾನೋ, ಅವನೇ ಭ್ರಾಂತನು (ಹುಚ್ಚನು). ಈ ಆತ್ಮನಿಂದಲೇ ಲೋಕಸಮೂಹವು, ಭೂತಸಮೂಹವು ಮತ್ತು ದೇವಸಮೂಹವೂ ಉತ್ಪನ್ನವಾಗಿದೆ. ಆದರಲ್ಲಿಯೇ ಇರುತ್ತದೆ. ಮತ್ತು ಅದರಲ್ಲಿಯೇ ಎಲ್ಲವೂ ನಷ್ಟ(ಲೀನ)ವಾಗಿ ಹೋಗುತ್ತದೆ. ಯಾಜ್ಞವಲ್ಕ್ಯನು ಮತ್ತೂ ಹೇಳುತ್ತಾನೇನಂದರೆ—ಹೇ

ಮೈತ್ರೇಯಿಯಾ! ಯಾವ ರೀತಿ ದುಂದುಭಿಯ (ಒಂದುವಿಧವಾದ ವಾದ್ಯ ವಿಶೇಷ) ಜ್ಞಾನವಿಲ್ಲದಿದ್ದರೆ ದೂರದಿಂದ ದುಂದುಭಿಯ ಸ್ವರವು ಕೇಳ ಬಂದರೆ ಯಾವ ರೀತಿ ದುಂದುಭಿಯ ಧ್ವನಿಯೆಂದು ತಿಳಿದುಬರುವು ದಿಲ್ಲವೋ, ಆದರೂ ಅದರ ಸ್ವರಜ್ಞಾನವು ತಿಳಿದಿದ್ದರೆ ಅದು ತಾನಾಗಿಯೇ ತಿಳಿದುಬರುತ್ತದೋ, ಹಾಗೆಯೇ ಶಂಖಧ್ವನಿ ತಿಳಿದಿರದಿದ್ದರೆ ಯಾವ ರೀತಿ ಅದರ ನಾದವು ತಿಳಿಯುವುದಿಲ್ಲವೋ, ಆದರೆ ಶಂಖಧ್ವನಿಯನ್ನು ತಿಳಿದಿ ದ್ದರೆ ಅದರ ನಾದವನ್ನು ಸಹ ಸುಲಭವಾಗಿ ತಿಳಿದುಕೊಳ್ಳಲಾಗುತ್ತದೋ, ಹಾಗೆಯೇ ವೀಣೆಯ ಜ್ಞಾನವಿಲ್ಲದಿದ್ದರೆ ಎಲ್ಲಿಯಾದರೂ ವೀಣಾನಾದವು ಕೇಳಿಬಂದರೆ ಯಾವದರ ಶಬ್ದವೆಂದು ತಿಳಿಯುವುದಿಲ್ಲವೋ, ಆದರೆ ವೀಣೆಯ ಜ್ಞಾನದಿಂದ ಶಬ್ದಜ್ಞಾನವು ತಿಳಿದುಬರುತ್ತದೋ, ಅದೇ ರೀತಿ ಆತ್ಮಜ್ಞಾನದ ವಿನಹ ಎರಡನೇ ಯಾವ ವಿಧವಾದ ಸತ್ಯದ ಜ್ಞಾನವೂ ಉಂಟಾಗುವುದಿಲ್ಲ. ಯಾವ ರೀತಿ ಒದ್ದೆಯಾದ ಕಟ್ಟಿಗೆಯಿಂದ ಹೊಗೆ ಯೇಳುವುದೋ, ಹೇ ಮೈತ್ರೇಯಿಯಾ! ಅದೇ ರೀತಿ ಮಹಾತ್ಮನಾದ ಪರಮಾತ್ಮನ ಶ್ವಾಸಸ್ವರೂಪವೇ ಈ ಋಗ್ವೇದ, ಯಜುರ್ವೇದ, ಸಾಮ ವೇದ, ಅಥರ್ವಾಂಗಿರಸ, ಇತಿಹಾಸ, ಪುರಾಣ, ಬ್ರಹ್ಮವಿದ್ಯ, ದೇವಜನ-ವಿದ್ಯಾ, ಉಪನಿಷತ್, ಶ್ಲೋಕ, ಸೂತ್ರ, ಅನುವ್ಯಾಖ್ಯಾ, ಮಂತ್ರವ್ಯಾ ಖ್ಯಾದಿಗಳಾಗಿವೆ. ಯಾವ ರೀತಿ ನದ, ನದಿ, ಹೊಳೆ ಮೊದಲಾದ ಎಲ್ಲಾ ಜಲಾಶಯಗಳ ಜಲಕ್ಕೂ ಏಕಮಾತ್ರ ಸ್ಥಾನವು ಸಮುದ್ರವೋ, ಸ್ಪರ್ಶದ (ಮುಟ್ಟುವ) ಆಧಾರವು ತ್ವಕ್(ಶರೀರದ ಚರ್ಮ)ವೋ, ರಸದ ಆಧಾರವು ಹ್ಯಾಗೆ ರಸನ(ನಾಲಿಗೆ)ವೋ, ಗಂಧದ ಆಧಾರವು ನಾಸಿಕ(ಮೂಗು)ವೋ, ವರ್ಣಗಳ ಆಧಾರವು ನೇತ್ರವೋ, ಶಬ್ದದ ಆಧಾರವು ಕಿವಿಯೋ, ಸಂಕಲ್ಪದ ಆಧಾರವು ಮನಸ್ಸೋ, ಜ್ಞಾನದ ಆಧಾರವು ಹೃದಯವೋ, ಧರ್ಮಕ್ಕೆ ಕೈಯೋ, ಗತಿಗೆ ಚರಣವೋ, ತತ್ವಕ್ಕೆ ವೇದಗಳ ವಾಕ್ಯವೋ, ಯಾವ ರೀತಿಯಲ್ಲಿ ನೀರಿಗೆ ಒಂದು ತುಂಡು ಉಪ್ಪನ್ನು ಸೇರಿಸಿದರೆ ನೀರಿನಂತೆಯೇ ಕಾಣಬರುತ್ತದೋ, ಯಾರೂ ಅದನ್ನು ನೋಡಲಾರರೋ, ಸ್ವಾದಿಸಿ ನೋ ಡಲು ಅದರ ಜ್ಞಾನವು ಉಂಟಾಗುವುದೋ, ಅದೇ ರೀತಿ ಎಲ್ಲಾ ವಸ್ತು

ಗಳ ಆಧಾರವು ಆತ್ಮನು. ಅದೇ ಅದ್ಭುತಪುರುಷನಾದ ಪರಮಾತ್ಮನು. ಆ ಅನಂತ, ಅಪಾರ ಮತ್ತು ವಿಜ್ಞಾನ ಘನವನ್ನು ಅರ್ಥಾತ್ ಜ್ಞಾನಮಾತ್ರದಿಂದಲೇ ತಿಳಿಯಲಾಗುತ್ತದೆ. ಮತ್ತು ಈ ಎಲ್ಲಾ ಭೂತ, ಜೀವಾತ್ಮರು, ವಿನಾಶಶೀಲರು. ಮೃತ್ಯುವಿನ ಮುಂದೆ ಯಾರದ್ದೂ ನಾಮ ನಿಶಾನಿಯಾದರೂ ಇರುವುದಿಲ್ಲ. ಹೇ ಮೈತ್ರೇಯಿ! ನಾನು ಇದನ್ನೇ ವಿಶ್ವಾಸಿಸುತ್ತೇನೆ.

**ಮೈತ್ರೇಯಿ:**— ಪ್ರಾಣೇಶ್ವರ! ಮೃತ್ಯುವಿನ ಮುಂದೆ ಜೀವಾತ್ಮರ ನಾಮ ನಿಶಾನಿಯೂ ಇರುವುದಿಲ್ಲ. ಹೀಗೆ ಹೇಳಿ ತಾವು ನನ್ನನ್ನು ಭ್ರಮೆಗೊಳಿಸಿದಿರಿ.

**ಯಾಜ್ಞವಲ್ಕ್ಯ:**— ನಾನು ನಿನ್ನನ್ನು ಮೋಹದಲ್ಲಿ ಸಿಲುಕಿಸಲಿಲ್ಲ. ಈ ಆತ್ಮನು ಅವಿನಾಶಿಯು. ಇದರಲ್ಲಿ ಅಂತರವಿರುವುದಿಲ್ಲ (ಅವಿಕ್ರಿಯವು). ಆದರೆ ದ್ವೈತಜ್ಞಾನವು ಅವಿನಾಶಿಯಾಗಿ ತಿಳಿದುಬರುತ್ತದೆ. ಆತನೊಬ್ಬನೇ ನಿಜವಾದ ವಸ್ತುವು. ಬೇರೆಲ್ಲಾ ವಸ್ತುಗಳು ಅದರ ಛಾಯಾಮಾತ್ರವೇ ಆಗಿರುತ್ತವೆ. ಹೇಗೆ ನೀರಿನಲ್ಲಿ ಚಂದ್ರನ ಛಾಯೆಯು ಪ್ರಕಾಶಿಸುವುದೋ, ಅದು ನಿಜವಲ್ಲ. ಯಾಕಂದರೆ—ಆ ಜಲವು ಅಲ್ಲಿ ಇಲ್ಲದಿರುವಾಗ ಆ ಚಂದ್ರನ ಛಾಯೆಯೂ ಕೂಡ ಅಲ್ಲಿ ನಿಲ್ಲುವುದಿಲ್ಲ. ನಿಜವಾದ ಚಂದ್ರನೊಬ್ಬನೇ ಇರುತ್ತಾನೆ. ಅದೇ ರೀತಿ ಭೂತಸಮೂಹವೂ ಜೀವಾತ್ಮಸಮೂಹವೂ ಅದೇ ಸತ್ಯಸ್ವರೂಪ ಪರಮಾತ್ಮನ ಛಾಯಾಮಾತ್ರವು (ಪ್ರತಿಬಿಂಬ). ನಿಜವಲ್ಲ, ಅಜ್ಞಾನದ ಕಾರಣದಿಂದ ಛಾಯೆಯು ಕೂಡ ನಿಜವೆಂಬದಾಗಿ ಪ್ರತೀತವಾಗುತ್ತದೆ. ಅಜ್ಞಾನವು ನಾಶವಾದಕೂಡಲೇ ಪರಮಾತ್ಮನೊಬ್ಬನೇ ಉಳಿಯುತ್ತಾನೆ. ಛಾಯಾಮಾತ್ರದ ಹೆಸರು ನಿಶಾನಿಯೇ ಇರುವುದಿಲ್ಲ. ಎಲ್ಲಿ ದ್ವೈತಜ್ಞಾನವಿರುವುದೋ, ಅಲ್ಲಿ ಒಬ್ಬನು ಇನ್ನೊಂದರ ದರ್ಶನವನ್ನು ಮಾಡುತ್ತಾನೆ. ಒಬ್ಬನು ಇನ್ನೊಂದರ ಗಂಧವನ್ನಾಘ್ರಾಣಿಸುತ್ತಾನೆ. ಒಬ್ಬನು ಇನ್ನೊಂದನ್ನು ಕೇಳುತ್ತಾನೆ. ಅದರ ವರ್ಣನವನ್ನು ಮಾಡುತ್ತಾನೆ. ಮನನಮಾಡುತ್ತಾನೆ. ಅದನ್ನು ತಿಳಿಯುತ್ತಾನೆ. ಯಾರ ದ್ವೈತವು

ನಷ್ಟವಾಗಿರುತ್ತದೋ, ಯಾರಿಗೆ ಏಕತ್ವದ ಜ್ಞಾನವಾಗಿರುತ್ತದೋ, ಅವನಿಗೆ ಇಂಥಾ ಸಂಭವವಾಗಲಾರದು. ಯಾವದರ ದ್ವಾರಾ ಎಲ್ಲಾ ವಿಷಯವನ್ನೂ ತಿಳಿಯಲಾಗುತ್ತದೋ, ಅದನ್ನು ಹೇಗೆ ತಿಳಿಯುವಿ? ಹೇ ಮೈತ್ರೇಯಿಾ! ತಿಳಿಯುವಂತಹ ವಿಜ್ಞಾನವನ್ನು ಹೇಗೆ ತಿಳಿಯುವಿ?

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## ನಾರೀಉಪದೇಶವು ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥

ಈ ಪುಸ್ತಕವು ಪಾವಂಜೆ ಗುರುರಾವ್, ಇವರ ಉಡುಪಿ ಶ್ರೀಕೃಷ್ಣಮುದ್ರಣದಲ್ಲಿ ಮುದ್ರಿಸಲ್ಪಟ್ಟು, ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿತು. ಶಾ. ಶಕ ೧೮೫೧. ಇಸವಿ 1928.